CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೧೭, ೨೦೦೫ (ಮಾಘ ೨೮, ಶಕ ವರ್ಷ ೧೯೨೬) | ಸಂಚಿಕೆ ೭ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೊಡಗು-ಮಡಿಕೇರಿ**

**ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಇ.ಎಸ್.ಟಿ. (1)/135/2004-05 ದಿನಾಂಕ: 23ನೇ ಡಿಸೆಂಬರ್ 2004**

**ವಿಷಯ :** ಗುತ್ತಿಗೆ ಆಧಾರದಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ನೇಮಕಾತಿ ಮಾಡುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ/977/ ಹೆಚ್‌ಎಸ್‌ಹೆಚ್/ 2001 ದಿನಾಂಕ: 02.11.2002.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ/504/ ಹೆಚ್‌ಎಸ್‌ಹೆಚ್/ 97 ಬೆಂಗಳೂರು ದಿನಾಂಕ: 17.10.1997.
3. ಸರ್ಕಾರದ ಪತ್ರಸಂಖ್ಯೆ: ಆಕುಕ/ 607/ ಹೆಚ್‌ಎಸ್‌ಹೆಚ್/2003/ ದಿನಾಂಕ: 13.02.2004.
4. ಈ ಕಛೇರಿ ಪತ್ರಿಕಾ ಪ್ರಕಟಣೆ ಪತ್ರ ಸಮ ಸಂಖ್ಯೆ ದಿನಾಂಕ: 04.10.04.

ಉಲ್ಲೇಖ (3)ರ ಸರ್ಕಾರದ ಆದೇಶದಂತೆ ಗ್ರಾಮಾಂತರ ಪ್ರದೇಶಗಳಲ್ಲಿ ಇರುವ ಪ್ರಾ.ಆ. ಕೇಂದ್ರಗಳಲ್ಲಿ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದಾಧಿಕಾರಿಗಳ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ/ ಮುಂದಿನ ಆದೇಶದವರೆಗೆ/ ನೇರ ನೇಮಕಾತಿಯಿಂದ ತುಂಬುವವರೆಗೆ/ ವರ್ಗಾವಣೆಯಿಂದ ತುಂಬುವವರೆಗೆ ಇದರಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ಮಾಸಿಕ ವೇತನ ರೂ. 7400.00 (ರೂಪಾಯಿ ಏಳುಸಾವಿರದ ನಾನ್ನೂರು ಮಾತ್ರ) ರಂತೆ ತುಂಬಲು ಅವಕಾಶವಿರುತ್ತದೆ. ಅದರಂತೆ ಉಲ್ಲೇಖ (4) ರ ಪ್ರಕಾರ ಕಛೇರಿಯಿಂದ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿತ್ತು. ಅದರಂತೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ/108/ಸಹಿ ಮಾ/95 ದಿನಾಂಕ: 20.05.1995ರ ಮೀಸಲಾತಿಯನ್ನು ಪರಿಗಣಿಸಿ ಉಲ್ಲೇಖ (2)ರ ಸರ್ಕಾರಿ ಆದೇಶದ ಅನುಬಂಧ (1) ರಲ್ಲಿನ ನಿಬಂಧನೆ ಮತ್ತು ಷರತ್ತಿಗೊಳಪಟ್ಟು ಹಾಗೂ ಸರ್ಕಾರವೂ ಆಗಿಂದಾಗ್ಗೆ ಹೊರಡಿಸುವ ನಿಯಮಗಳಿಗೆ ಒಳಪಟ್ಟು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ಸಂಸ್ಥೆಗಳಿಗೆ ನೇಮಕ ಮಾಡಲಾಗಿದೆ.

| ಕ್ರ. ಸಂ. | ಹೆಸರು ಮತ್ತು ವಿಳಾಸ | ವರ್ಗ | ನೇಮಕ ಮಾಡಿದ ಸ್ಥಳ |
|---|---|---|---|
| 1. | ಡಾ: ಕೆ. ಎಂ. ಗಿರೀಶ್<br>ತಂದೆ, ಮಾದಯ್ಯ ಶೆಟ್ಟಿ<br>8/33, C/o ಲಕ್ಷ್ಮಿನಾರಾಯಣ ಮೂರ್ತಿ<br>ಕಾನ್ವೆಂಟ್ ಜಂಕ್ಷನ್, ಮಡಿಕೇರಿ. | ಸಾಮಾನ್ಯ ವರ್ಗ | ಪ್ರಾ.ಆ. ಕೇಂದ್ರ ಸುಂಟಿಕೊಪ್ಪ |

1. ಮೇಲೆ ನಮೂದಿಸಿದ ವೈದ್ಯರು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಮಡಿಕೇರಿ ಇವರಲ್ಲಿ ಜ್ಞಾಪನ ಪತ್ರ ತಲುಪಿದ 7 ದಿವಸದ ಒಳಗೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು ತಪ್ಪಿದಲ್ಲಿ ಈ ನೇಮಕಾತಿ ಆದೇಶವೂ ತಾನಾಗಿಯೇ ರದ್ದಾಗುತ್ತದೆ.
2. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ಕರ್ತವ್ಯಕ್ಕೆ ತೆಗೆದುಕೊಳ್ಳುವ ಮುನ್ನ ಅವರ ಮೂಲ ಜನನ ಪ್ರಮಾಣ ಪತ್ರ/ ಜಾತಿ ಪ್ರಮಾಣ ಪತ್ರ ಹಾಗೂ ಇನ್ನಿತರ ದಾಖಲಾತಿಗಳನ್ನು ಪರಿಶೀಲಿಸಿ ಸರಿಯಾಗಿದೆಯೇ ಎಂದು ಖಚಿತಪಡಿಸಿಕೊಂಡು ಕರ್ತವ್ಯಕ್ಕೆ ತೆಗೆದುಕೊಳ್ಳಲು ಸೂಚಿಸಿದೆ. ಮೂಲ ದಾಖಲಾತಿಗಳಲ್ಲಿ ವ್ಯತ್ಯಾಸ ಕಂಡು ಬಂದಲ್ಲಿ ನೇಮಕಾತಿ ಆದೇಶವನ್ನು ರದ್ದುಪಡಿಸಲಾಗುವುದು.
3. ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅಭ್ಯರ್ಥಿಗಳು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರ ಮತ್ತು ಸರ್ಕಾರದ ಆದೇಶದಂತೆ ಹೇಳಿರುವ ನಿಬಂಧನೆ ಮತ್ತು ಷರತ್ತುಗಳನ್ನು ಒಪ್ಪಿಕೊಂಡಿರುವ ಬಗ್ಗೆ ರೂ. 50.00 (ರೂ. ಐವತ್ತು ಮಾತ್ರ) ಛಾಪಾ ಕಾಗದದ ಮೇಲೆ ಮುಚ್ಚಳಿಕೆಯನ್ನು ಸಕ್ಷಮ ಪ್ರಾಧಿಕಾರದಿಂದ ಪ್ರಮಾಣೀಕರಿಸಿ ಸಲ್ಲಿಸತಕ್ಕದ್ದು.
4. ಕೇಂದ್ರ ಸ್ಥಾನದಲ್ಲಿ ವಾಸವಿರುವುದಾಗಿ ಮುಚ್ಚಳಿಕೆ ಬರೆದುಕೊಡತಕ್ಕದ್ದು.
5. ಯಾವುದೇ ಕಾರಣಕ್ಕೂ ನೇಮಕಾತಿ ಮಾಡಿದ ಸ್ಥಳವನ್ನು ಬದಲಾಯಿಸಲು ಬರುವುದಿಲ್ಲಾ ಮತ್ತು ವರ್ಗಾವಣೆಗೆ ಅವಕಾಶವಿರುವುದಿಲ್ಲಾ.

ಪಿ.ಆರ್.86

ಜಿಲ್ಲಾಧಿಕಾರಿಗಳು, ಕೊಡಗು, ಮಡಿಕೇರಿ.

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು-01**

**ಅಧಿಸೂಚನೆ ಸಂಖ್ಯೆ: ಕೃಮಾಇ/169/ನಿಯವಿ/2004 ದಿನಾಂಕ: 1ನೇ ಡಿಸೆಂಬರ್ 2004**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (2)ರ ಮೇರೆಗೆ ಹೊರಡಿಸಲಾದ ಅಧಿಸೂಚನೆ ಸಂಖ್ಯೆ ಕೃಮಾಇ:169:ನಿಯವಿ: 2004, ದಿನಾಂಕ: 20.07.2004 (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ರಲ್ಲಿ ಕರ್ನಾಟಕದಲ್ಲಿನ ಕೃಷಿ ಮಾರಾಟ ನಿರ್ದೇಶಕರು, ಬೆಂಗಳೂರು ಇವರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ನಿಪ್ಪಾಣಿ ಇದರ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟ ಕೃಷಿ ಉತ್ಪನ್ನಗಳ ನಿಯಂತ್ರಿತ ಮಾರಾಟಕ್ಕಾಗಿ ಚಿಕ್ಕೋಡಿ ತಾಲ್ಲೂಕಿನ ಸದಲಗಾ ಗ್ರಾಮ ಪಂಚಾಯಿತಿ ಪರಿಮಿತಿಯೊಳಗಿನ ಪ್ರದೇಶವನ್ನು ಉಪ ಮಾರುಕಟ್ಟೆ ಎಂದು ಮತ್ತು ಸದರಿ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು ಉಪ ಮಾರುಕಟ್ಟೆ ಪ್ರಾಂಗಣ ಎಂದು ಘೋಷಿಸಿದ್ದರು. ಸದರಿ ಅಧಿಸೂಚನೆಯಲ್ಲಿ ಘೋಷಿಸಿರುವ ಅನುಸೂಚಿಯಲ್ಲಿರುವ ನಿರ್ದಿಷ್ಟಪಡಿಸಿದ ಉಪ ಮಾರುಕಟ್ಟೆ ಪ್ರಾಂಗಣವನ್ನು ಅಪವರ್ಜಿಸಲಾಗಿದೆ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ), ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು ನಿಪ್ಪಾಣಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಾರುಕಟ್ಟೆ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರಿ ಅಧಿಸೂಚನೆಗಳ ಮೂಲಕ ಮಾರಾಟ ನಿಯಂತ್ರಣಕ್ಕೆ ಒಳಪಡಿಸಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಚಿಕ್ಕೋಡಿ ತಾಲ್ಲೂಕಿನ ಉಪ ಮಾರುಕಟ್ಟೆ ಪ್ರದೇಶದಲ್ಲಿನ ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು ಉಪ ಮಾರುಕಟ್ಟೆ ಪ್ರಾಂಗಣ ಎಂದು ಈ ಮೂಲಕ ಘೋಷಿಸಿದ್ದೇನೆ.

**ನಿಯಂತ್ರಣಕ್ಕೊಳಪಡಿಸಿರುವ ಕೃಷಿ ಉತ್ಪನ್ನಗಳು**

1. ಜಾನುವಾರುಗಳು 2. ಮೇಕೆಗಳು, 3. ಕುರಿಗಳು 4. ಹತ್ತಿ (ಬೀಜ ತೆಗೆದ ಮತ್ತು ತೆಗೆಯದ) 5. ಎಲ್ಲಾ ಹೂ.ಗಳು. 6. ಸಜ್ಜೆ 7. ಜವೆ ಗೋಧಿ 8. ಜೋಳ 9. ಕಂಬು 10. ಮೆಕ್ಕೆಜೋಳ 11. ನವಣೆ 12. ಭತ್ತ 13. ರಾಗಿ 14. ಅಕ್ಕಿ 15. ಸಾಮೆ (ಸಾವೆ) 16. ಗೋಧಿ, 17. ಅಂಟುವಾಳ 18. ಬೊಂಬು 19.ಬೆತ್ತ 20. ಹಿಪ್ಪೆಬೀಜ 21. ಹೊಂಗೇಬೀಜ 22. ಬೇವಿನಬೀಜ 23. ಸೀಗೇಕಾಯಿ 24 ಹುಣಸೇಹಣ್ಣು 25. ಹುಣಸೇಬೀಜ 26. ಸೇಬು 27. ಬಾಳೆಹಣ್ಣು 28. ಬೋರೆಹಣ್ಣು 29. ಹುಳಿಹಣ್ಣುಗಳು 30. ಚಕ್ಕೋತನ ಹಣ್ಣು, 31. ಪೇರಲೆಹಣ್ಣು (ಸೀಬೆಹಣ್ಣು) 32. ದ್ರಾಕ್ಷಿ, 33. ಹಲಸಿನಹಣ್ಣು 34. ಜಂಬುನೇರಳೆ ಹಣ್ಣು 35. ನಿಂಬೆಹಣ್ಣು 36. ಕರಬೂಜ, 37. ಮಾವಿನಹಣ್ಣು 38. ಮೂಸಂಬಿ 39 ಮರಸೇಬು 40. ಪೈನಾಪಲ್ (ಅನಾನಸ್) 41. ಪಪ್ಪಾಯಿಹಣ್ಣು (ಪರಂಗಿಹಣ್ಣು) 42. ದಾಳಿಂಬೆಹಣ್ಣು 43. ಸಪೋಟಾ 44. ಸಿದ್ದೋಟ 45. ಕಿತ್ತಳೆ 46. ಕಲ್ಲಂಗಡಿ 47. ನೆಲಗಡಲೆ (ಶೇಂಗಾ) (ಕಾಯಿ ಮತ್ತು ಬೀಜ) 48. ಹರಳುಬೀಜ, 49. ಹತ್ತಿಬೀಜ 50. ಅಗಸೆಬೀಜ 51. ಸಾಸುವೆ 52. ಹುಚ್ಚೆಳ್ಳು 53. ಕುಸುಬೆ 54. ಎಳ್ಳು 55. ಸೂರ್ಯಕಾಂತಿಬೀಜ, 56. ಸೋಯಾಬಿನ್ 57. ಅಡಿಕೆ 58. ಗೋಡಂಬಿಬೀಜ 59. ಒಣಮೆಣಸಿನಕಾಯಿ 60. ತೆಂಗಿನಕಾಯಿ 61. ಕೊಬ್ಬರಿ 62 ಕೊತ್ತಂಬರಿಬೀಜ (ಧನಿಯಾ) 63. ಬೆಳ್ಳುಳ್ಳಿ 64. ಶುಂಠಿ 65 ಮೆಂತ್ಯ 66. ಕಾಳುಮೆಣಸು 67. ಅರಿಶಿನ 68. ಅಲಸಂದೆ (ಇಡೀ ಮತ್ತು ಒಡೆದ) 69. ಅವರೆ (ಇಡೀ ಮತ್ತು ಒಡೆದ) 70. ಕಡಲೆ (ಇಡೀ ಮತ್ತು ಒಡೆದ) 71. ಉದ್ದು (ಇಡೀ ಮತ್ತು ಒಡೆದ) 72. ಬುಲ್ಲರ್ (ಇಡೀ ಮತ್ತು ಒಡೆದ) 73. ಹೆಸರು (ಇಡೀ ಮತ್ತು ಒಡೆದ) 74 ಹುರುಳಿ 75 ಲಾಕ್ (ಇಡೀ ಮತ್ತು ಒಡೆದ) 76 ಮಡಿಕೆ (ಮಟಕಿ) (ಇಡೀ ಮತ್ತು ಒಡೆದ) 77. ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ) 78. ಬಟಾಣಿ 79. ತೊಗರಿ (ಇಡೀ ಮತ್ತು ಒಡೆದ) 80. ಮೋತ್ (ಇಡೀ ಮತ್ತು ಒಡೆದ) 81. ಎಲ್ಲಾ ತರಕಾರಿಗಳು (ಗರ್ಕಿನ್ ಹೊರತುಪಡಿಸಿ ಸೊಪ್ಪುಗಳು ಸೇರಿಸಿ) 82. ಕಾಯಿಗಳು 83. ಹಸಿರುಮೆಣಸಿನಕಾಯಿ 84. ಈರುಳ್ಳಿ 85. ಆಲೂಗಡ್ಡೆ 86. ಸುವರ್ಣಗೆಡ್ಡೆ 87 ಸಿಹಿಗೆಣಸು (ಗೆಣಸು) 88. ಟೊಮ್ಯಾಟೋ 89. ಬೀಟೆ (ರೋಸ್‌ವುಡ್) 90. ಬಿಲ್ವಾಲ 91. ಉರುವಲು ಕಟ್ಟಿಗೆ 92. ಗಂಜಾನ್ 93. ಹಡಗ 94. ಹಳದಿ 95. ಹನಿಮತ್ತಲ್ 96. ಹೊನ್ನೆ 97. ಐಯಾನಿ 98. ಹಲಸಿನಮರ 99. ಜಂಬ 100. ಕಲನ್ 101. ಕಿಂಡಲ್ 102. ಮಾವಿನಮರ 103. ಮತ್ತಿ 104. ನಂದಿ 105. ರಾಂಪತ್ರೆ 106 ತೇಗ (ಸಾಗವಾನಿ) 107. ಬಿಳಿ ದೇವದಾರು (ಕೇದರ) 108 ಸಿಲ್ವರ್ ಓಕ್. 109 ನೀಲಗಿರಿ 110. ವೀಳ್ಯೆದೆಲೆ 111. ಬೆಲ್ಲ 112. ತೆಂಗಿನಕಡ್ಡಿ 113 ಒಣದ್ರಾಕ್ಷಿ.

**ಅನುಸೂಚಿ**

ಚಿಕ್ಕೋಡಿ ತಾಲ್ಲೂಕಿನ ಸದಲಗಾ ಪಟ್ಟಣದ ಉಪ ಮಾರುಕಟ್ಟೆ ಪ್ರದೇಶದಲ್ಲಿನ ರಿ.ಸ.ನಂ. 795ಬ ಪೈಕಿ 3 ಎಕರೆ 6 ಗುಂಟೆ ಜಮೀನಿನ ಈ ಕೆಳಗಿನ ಸೀಮಾಬದ್ಧ ಸ್ಥಳ;

| | | |
|---|---|---|
| ಪೂರ್ವಕ್ಕೆ | - | ಅಂಬೇಡ್ಕರ್ ಮನೆಗಳು |
| ಪಶ್ಚಿಮಕ್ಕೆ | - | ಸದಲಗಾ- ಇಚಲಕರಂಜ ರಸ್ತೆ |
| ದಕ್ಷಿಣಕ್ಕೆ | - | ಆಶ್ರಯ ಮನೆಗಳು |
| ಉತ್ತರಕ್ಕೆ | - | ಪಟ್ಟಣ ಪಂಚಾಯಿತಿ ಶೌಚಾಲಯ ಮತ್ತು ಪ್ರೈವೇಟ್ ಲ್ಯಾಂಡ್ (ಖಾಸಗಿ ಜಾಗ) |

**ಸೈಯದ್ ಜಮೀರ್ ಪಾಷಾ**

ಪಿ.ಆರ್.87

ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು.

**ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರ ನಡಾವಳಿಗಳು**

**ಉಪಸ್ಥಿತರು :** ಶ್ರೀ ಆರ್. ರಾಜಶೇಖರ್, ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು.

**ವಿಷಯ :** ಕೆಎ-18:12 ಶಾಲಾ ವಾಹನ ಇದರ ನೋಂದಣಿ ಹಾಗೂ ನೋಂದಣಿ ಪತ್ರ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** ಮಾಲೀಕರಾದ ಕಾರ್ಯದರ್ಶಿ, ಸಂಜೀವಿನಿ ವಿದ್ಯಾಸಂಸ್ಥೆ, (ರಿ) ಚಿಕ್ಕಮಗಳೂರು ರವರ ಅರ್ಜಿ ದಿನಾಂಕ: 10.11.2004.

ಕೆಎ-18:12 ಶಾಲಾ ವಾಹನ ಇದರ ನೋಂದಾಯಿತ ಮಾಲೀಕರಾದ ಕಾರ್ಯದರ್ಶಿಗಳು, ಸಂಜೀವಿನಿ ವಿದ್ಯಾ ಸಂಸ್ಥೆ (ರಿ) ಚಿಕ್ಕಮಗಳೂರು ರವರು ಕಛೇರಿಗೆ ದಿನಾಂಕ: 10.11.2004 ರಂದು ಸದರಿ ವಾಹನದ ದಾಖಲಾತಿಗಳೊಂದಿಗೆ ಅರ್ಜಿ ನೀಡಿ, ಈ ವಾಹನವು 1989ರ ಮಾಡೆಲ್‌ನದಾಗಿದ್ದು, ಹಳೆಯದಾಗಿದ್ದು ರಸ್ತೆಯಲ್ಲಿ ಉಪಯೋಗಿಸಲು ಅನರ್ಹವಾಗಿದ್ದು ಹಾಗೂ ದುರಸ್ಥಿ ಕಾರ್ಯ ದುಬಾರಿ ಆಗಿರುವುದರಿಂದ ಈ ವಾಹನದ ನೋಂದಣಿ ಹಾಗೂ ನೋಂದಣಿ ಪತ್ರ ರದ್ದುಪಡಿಸಬೇಕೆಂದು ಕೋರಿರುತ್ತಾರೆ. ಕಛೇರಿ ದಾಖಲೆಗಳಂತೆ ಈ ವಾಹನದ ತೆರಿಗೆಯನ್ನು

31.3.2005 ರವರೆಗೆ ಪಾವತಿಸಿರುತ್ತಾರೆ. ಮಾಲೀಕರ ಕೋರಿಕೆಯನ್ನು ಪರಿಗಣಿಸಿ, ಈ ವಾಹನದ ನೋಂದಣಿ ರದ್ದುಪಡಿಸಲು ಕೆಳಗಿನ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಪ್ರಾಸಾಅ: ಜಿಮ: ನೋಂದಣಿ: ಕೆಎ18:12:04-05 ದಿನಾಂಕ: 23ನೇ ನವೆಂಬರ್ 2004**

ಕೇಂದ್ರ ಮೋಟಾರು ವಾಹನಗಳ ಕಾಯಿದೆ. 1988ರ ಕಲಂ 55 ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ಆದ ನಾನು ಕೆಎ-18:12 ಶಾಲಾ ವಾಹನದ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಸರಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಕಂಡುಬಂದಲ್ಲಿ, ಮಾಲೀಕರೇ ಪಾವತಿಸಲು ಬದ್ಧರೆಂಬ ಷರತ್ತಿನ ಮೇಲೆ ನೋಂದಣಿಯನ್ನು ರದ್ದುಪಡಿಸಿರುತ್ತೇನೆ. ಈ ಆದೇಶವು ದಿನಾಂಕ: 23.11.2004 ರಿಂದ ಜಾರಿಗೆ ಬಂದಿರುತ್ತದೆ.

**ವಾಹನದ ವಿವರಗಳು:**

| | | | |
|---|---|---|---|
| 1) | ವಾಹನ ಸಂಖ್ಯೆ | : | ಕೆಎ-18:12 |
| 2) | ವರ್ಗ | : | ಶಾಲಾ ವಾಹನ |
| 3) | ತಯಾರಿಕೆ | : | ಟಾಟಾ |
| 4) | ಮಾಡೆಲ್ | : | 1989 (ಎಂಭತ್ತೊಂಭತ್ತು) |
| 5) | ನೋಂದಣಿ ದಿನಾಂಕ | : | 1-1-1990 |
| 6) | ಚಾಸಿಸ್ ಸಂಖ್ಯೆ | : | 344050322235 |
| 7) | ಎಂಜಿನ್ ಸಂಖ್ಯೆ | : | 692ಡಿ23331809 |
| 8) | ತೆರಿಗೆ ಪಾವತಿ | : | 31-3-2005 |
| 9) | ಹೆಚ್‌ಪಿಎ | : | ಹೊಂದಿರುವುದಿಲ್ಲ. |
| 10) | ಮಾಲೀಕರು | : | ಕಾರ್ಯದರ್ಶಿ, ಸಂಜೀವಿನಿ ವಿದ್ಯಾಸಂಸ್ಥೆ (ರಿ). ಚಿಕ್ಕಮಗಳೂರು. |

**ಆರ್. ರಾಜಶೇಖರ್**

ಪಿ.ಆರ್.88

ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,
ಚಿಕ್ಕಮಗಳೂರು.

## COMMERCIAL TAXES DEPARTMENT

**Office of the Joint Commissioner of Comml. Taxes (Admn & Int), Bellary Divn; Bellary**

**No. JCCT (A & I)/BLY/S.4/04-05/1008 Dated: 20th December 2004**

**Sub :** CST Act 1956 - Loss of "C" forms No. C 010773 to C. 010780 by the dealer M/s. Sree Vijaya Rice Mill, Koppal.

**Ref :** Letter No. ACCT/K/C forms/ 04-05/ T.No. 356 dated: 7.12.2004 of the Asst. Commissioner of Commercial Taxes, Koppal.

M/s. Sree Vijaya Rice Mill, Koppal bearing KST 63809528, borne on the files of the Asst. Commissioner of Commercial Taxes, Koppal has reported that the following 8 leaves of "C" forms obtained from the Office of the Asst. Commissioner of Commercial Taxes, Koppal are lost while they were in his custody and they were blank forms bearing No. C. 010773 to C. 010780. They have also given publicity of the same in Vijaya Karnataka, Daily newspaper on 27-10-2004 and they have furnished indemnity bond in Form G before the Assessing authority, the Asst. Commissioner of Commercial Taxes, Koppal for a sum of Rs. 20,000-00 in the event of anybody mis-use such lost forms and also tendered N.S.C. for Rs. 20,000/- with the Assessing authority. Copy of the indemnity bond is also enclosed herewith. They have also given a Police Complaint before the Circle Inspector of Police, Koppal.

The Asst. Commissioner of Commercial Taxes, Koppal in their letter No. ACCT/K/C/04-05/ T.No. 356 date 7.12.2004 have requested this office to move for publication of the lost "C" forms for wide publicity in the State Gazette as per the provisions of the CST Act 1956.

So I request you to kindly publish the above lost "C" forms as obsolete and invalid for the general public in your next Gazette and copy of the same may please be sent to the Asst. Commissioner of Commercial Taxes, Koppal and to this office.

Joint Commissioner of Commercial Taxes,
(Admn. & Int). Bellary Division, Bellary.

PR-89

## OFFICE OF THE CONTROLLER OF LEGAL METROLOGY IN KARNATAKA BANGALORE

**No. CLM/ACT/LIR/CR-136/02-03, Dated: 4th December 2004**

**Sub :** Levying of repairing charges on Weights, Measures, Weighing and Measuring Instruments by licenced repairs.

Some of the repairers have represented to this office that the cost of material and labour has gone up considerably and that the repairing rates which were fixed in the year 1992 by the Department were extremely low and uneconomical. Therefore a meeting of the representatives of repairers chamber of commerce of various dist. and traders Associations in the State was convened on 11.12.02 and 03.03.03 to discuss the issue. The issue was discussed in detail with the representatives present and the

Officers of the Department. After taking into consideration the views of the representatives, it was felt that an upward revision of repairing rates was justified in the prevailing circumstances of higher prices and increase in wages. Hence, the following order.

**ORDER**

After careful consideration of the subject matter and in pursuance of condition 1(d) of Schedule VI Form LR-3 of the Karnataka Standards of Weights and Measures (Enforcement) Rules, 1988, I, H.D. Balakrishnegowda, Controller of Legal Metrology in Karnataka, Bangalore hereby lay down the repairing charges for various items of weights and measures as noted below to comply strictly.

| (A) C.I. WEIGHTS | RATES FIXED | Including loading of lead and painting etc., |
|---|---|---|
| 50 Kg | 15/- | -do- |
| 20 Kg | 10/- | -do- |
| 10 Kg | 10/- | -do- |
| 5 Kg | 8/- | -do- |
| 2 Kg | 8/- | -do- |
| 1 Kg | 8/- | -do- |
| 500 gms. | | |
| 200 gms | | |
| 100 gms | 4/- each | -do- |
| 50 gms. | | |

**(B) BULLION AND COMMERCIAL BRASS WEIGHTS**

| | | |
|---|---|---|
| 1 Kg and above | 15/- each | |
| 500 gms. to 20gms. | 10/- each | |
| Below 20 gms. | No charges. | |

**(C) CONICAL MEASURES:**

| | | |
|---|---|---|
| 201. | 25/- | These include tinkering |
| 101. | 20/- | soldering and revetting in |
| 51. | 20/- | order to set right the measure |
| 21. | 15/- | and stop leakages |
| 11. | 15/- | -do- |
| 500 ml. | 8/- | -do- |
| 200 ml. | 8/- | -do- |
| 100 ml. | 8/- | -do- |

**(D) DIPPING AND POURING MEASURES:**

| | | |
|---|---|---|
| Each measures | 8/- | |

**(E) LENGTH MEASURES:**

| | | |
|---|---|---|
| 1 Meter | 10/- | Both revets should be changed. |
| 1/2 Meter | 10/- | -do- |

**(F) BEAM SCALES CLASS 'C' & 'D'**

| | | |
|---|---|---|
| 100 g. Capacity | 5/- | |
| 200 g. | 5/- | |
| 500 g. | 5/- | |
| 1 Kg | 15/- | |
| 2 Kg | 15/- | |
| 5 Kg | 15/- | |
| 10Kg | 25/- | |
| 20 Kg | 25/- | |
| 50 Kg. | 50/- | Including painting |
| 100 Kg. and above | 100/- | -do- |

**(G) BEAM SCALES CLASS 'B'**

| | | |
|---|---|---|
| 1 Kg and above | 80/- | |
| 500 gm. and below | 30/- | |

**(H) COUNTER SCALES:**

| | | |
|---|---|---|
| 1 Kg Capacity | 75/- | |
| 2 Kg capacity | 100/- | Dismantling, Sharpening of knife edges |
| 5 Kg. | 100/- | and bearing; setting right. |
| 10 Kg to 15 Kg. | 100/- | |
| 15 Kg to 30 Kg. | 150/- | |

**(1) SPRING BALANCES AND PERSON WEIGHING MACHINES:**

All types and all capacities 150/-

**(J) SELF AND SEMISELF INDICATING SCALES:**

All types and all capacities Rs. 200/-

**(K) PLATFORM SCALES AND WEIGH BRIDGES**

| | | |
|---|---|---|
| All types and all Capacities | 200-00 | |
| 50 Kg. Capacity | 200-00 | These charges include, servicing adjusting, painting. The platform machine should invariably be dis-mantled knife edges and bearings Polished, errors removed in all respects and refitted and painted. |
| 100 Kg. | 200-00 | |
| 150 Kg. | 200-00 | |
| 200 Kg. | 300-00 | |
| 300 Kg. | 300-00 | |
| 500 Kg. | 500-00 | |
| 1000 Kg. | 500-00 | |
| Above 1000Kg. | 500-00 | |
| Dial scales of All capacities | 500-00 | |

**(L) WEIGH BRIDGES:**

| | |
|---|---|
| 10 Tons and below | 2,000-00 |
| Above 10 Tons upto 20 Tons | 3,000-00 |
| Above 20 Tons | 5,000-00 |

**(M) AUTO AND TAXI FRE METERS** 100-00

**NOTE:**

1. The above charges are not binding on such maintenance contracts entered into as in Annexure-I in writing between the user and repairers.

2. Replacement of worn out parts etc., if any and the charges for such replacement should be brought to the notice of the concerned parties and their consent should be obtained in writing before any replacement is made.

3. The repairers should deposit the copy of the cash bill/maintenance contract agreement with the concerned verification and stamping authority.

4. Any repairer who contravenes any of the provisions of the above order, will be deemed to have violated the conditions of the repairing license.

Controller of Legal Metrology.

**ANNEXURE-I**

**MAINTENANCE CONTRACT AGREEMENT FORM BETWEEN REPAIRER AND TRADERS/ INDUSTRIES/OTHERS.**

**LICENCE NO.**

NAME OF THE REPAIRER

**IN TRIPLICATE**

Name of the Party
...................................
...................................
...................................

Date..........................

**MAINTENANCE SERVICE CONTRACT (APPLICABLE TO WEIGHING AND MEASURING INSTRUMENTS ONLY)**

I/we are the repairers, licenced by the Department of Legal Metrology. I/we hereby undertake to service your scales under our maintenance scheme, the full details of which are given overleaf. The premium for maintenance of your scales listed below will be Rs.............................. (Rupees (in words)..........................................................................................) only.

1. In full on date of acceptance and thereafter on the same date each year
2. Quarterly in equal instalments on the last day of March, June, September, December

Delete as required

Signature of Repairer.

**LIST OF SCALES TO BE MAINTAINED**

| Location | Maker's Name | Description | Sl.No. (If any) | Capacity | Size of platform (if any) |
|---|---|---|---|---|---|
| 1 | 2 | 3 | 4 | 5 | 6 |
| | | | | | |

Continued on sheets No. (s)......................................................... attached (Delete this line if not required).

**ACCCEPTANCE**

I/We hereby accept this contract, Contract to commence from .......................................................
Date...................................

Signature of Traders.

**SERVICE:**

1. Every year we undertake to overhaul and repair your weighing equipment, as listed overleaf and get the same reverified and stamped by Government Inspectors in accordance with the weights and measures Act.
2. We will attend four time per annum to examine, test and adjust your weighing equipment as listed over leaf.
3. We will attend service at any time between these visits, if necessary.
4. All travelling and other expenses are included in this contract.
5. All repairs (including thorough overhaul) of the working parts necessitated by wear and tear are included.
6. Old parts which we replace with new or reconditioned parts become our property.

**GENERAL CONDITIONS:**

1. Customer to provide unskilled assistance.
2. Customer to allow us the free use of his weights whenever necessary.
3. We attend upon the Inspector of Weights and Measures whenever reverification of the scales under this contract is necessary customer pays only the Inspector's fees and expenses and any charge for the transport or use of the Inspector test Weights/ and /or equipment as required under the act.
4. All work to be done in ordinary working hours.
5. This contract may be terminated by six months notice in writing given by either party, to expire on the last day of March, June, September or December, but no such notice shall be given before the expiration of three years from the commencement of this contract.
6. We will accept responsibility for damage of property caused by our neglect or negligence of our employees.
7. We reserve he right to alter the premium payable due to fluctuation cost of wages and/or materials.
8. This contract, does not include the stamping or adjusting of weights and measures unless specifically stated.

PR-90 Controller of Legal Metrology.

**ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ನಡವಳಿಕೆಗಳು**

**ವಿಷಯ :** ಋಣಸಮಾಪನೆಗೊಂಡಿರುವ ವಿಜಯ ಬಳಕೆದಾರರ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ: ಎಲ್‌ಕ್ಯೂಡಿ: ಸಿಆರ್:35: 2001-2002 ದಿನಾಂಕ: 30.5.2001.
2. ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಕೆ: ಎಲ್‌ಕ್ಯೂಡಿ: 93: 2002-2003 ದಿನಾಂಕ: 10.9.2003
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರದ ಸಂಖ್ಯೆ: ಎಆರ್‌ಕೆ: ಎಲ್‌ಕ್ಯೂಡಿ: ಸಿಆರ್:26:2001-2002 ದಿನಾಂಕ: 24.11.2004.

**ಪೀಠಿಕೆ:**

ಬಂಗಾರಪೇಟೆ ತಾಲ್ಲೂಕು ವಿಜಯ ಬಳಕೆದಾರರ ಸಹಕಾರ ಸಂಘ ನಿ., ಕೆ.ಜಿ.ಎಫ್ ಈ ಸಂಘವು ನೋಂದಣಿಯಾದ ದಿವಸದಿಂದ ತನ್ನ ಕಾರ್ಯವನ್ನು ಪ್ರಾರಂಭಿಸದೆ ಇದ್ದು ಸಂಪೂರ್ಣವಾಗಿ ನಿಷ್ಕ್ರಿಯಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1) ರಲ್ಲಿನ ಆದೇಶದಲ್ಲಿ ಸಂಘವನ್ನು ಋಣಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ನಂತರ ಅವರ ಬದಲಿಗೆ ಶ್ರೀ ವಿ. ನಾಗರಾಜು, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ನಿಯಮ 441, ಕೋಲಾರ ಜಿಲ್ಲಾ ಹಾಲು ಉತ್ಪಾದಕರ ಸಂಘಗಳ ಒಕ್ಕೂಟ ನಿ., ಕೋಲಾರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. (ಉಲ್ಲೇಖ-2).

ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರು ವರದಿ ಸಲ್ಲಿಸಿ (ಉಲ್ಲೇಖ-2) ಸಂಘದಲ್ಲಿ ಯಾವುದೇ ದಾಖಲೆಗಳು ಲಭ್ಯವಿಲ್ಲದೆ ಇದ್ದು, ಸಂಪೂರ್ಣವಾಗಿ ಸ್ಥಗಿತಗೊಂಡಿದ್ದು ಸಂಘದ ಸದಸ್ಯರಿಗೆ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಆಸಕ್ತಿ ಇಲ್ಲದೇ ಇರುವುದರಿಂದ ಸಂಘದ ಪುನಶ್ಚೇತನಕ್ಕೆ ಯಾವುದೇ ರಹಾ ಇಲ್ಲದೇ ಇದ್ದು ಇದನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಅಥವಾ ಸರ್ಕಾರಕ್ಕಾಗಲೀ ಯಾವುದೇ ಪ್ರಯೋಜನ ಇಲ್ಲದ ಕಾರಣ ಈ ಸಂಘದ ನೋಂದಣಿಯನ್ನು ರದ್ದುಪಡಿಸಬೇಕೆಂದು ಕೋರಿರುತ್ತಾರೆ ಹಾಗೂ ದಿನಾಂಕ: 30.10.2004 ರಂದು ನಡೆದ ಸಮಾಪನಾಧಿಕಾರಿಗಳ ಸಭೆಯಲ್ಲಿ ಸಮಾಪನಾಧಿಕಾರಿಗಳು ಕೈಗೊಂಡ ತೀರ್ಮಾನದ ನಡವಳಿಕೆಗಳನ್ನು ಮತ್ತು ಸಂಘದ ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ಧಾರಿಯನ್ನು ವಿಲೇವಾರಿ ಮಾಡಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್:35: 2001-2002 ದಿನಾಂಕ: 25ನೇ ನವೆಂಬರ್ 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಬಂಗಾರಪೇಟೆ ತಾಲ್ಲೂಕು ವಿಜಯ ಬಳಕೆದಾರರ ಸಹಕಾರ ಸಂಘ ನಿ., ಕೆಜಿಎಫ್ ಈ ಸಂಘದ ನೋಂದಣಿ ಸಂಖ್ಯೆ: ಎಆರ್49: ಯೋಜನೆ:ಸಿಆರ್;131: 20294:93-94 ದಿನಾಂಕ: 14-5-1993ನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ

1959ರ ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001 ದಿನಾಂಕ: 21.11.2001 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಶ್ರೀ ಬಿ. ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಿರುತ್ತೇನೆ ಹಾಗೂ ಸಮಾಪನಾಧಿಕಾರಿಗಳು ಸಂಘದ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 25.11.2004 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಬಿ. ಸಿ. ಸತೀಶ್**

ಪಿ.ಆರ್.91 ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ.

## ಮೀನುಗಾರಿಕೆ ಇಲಾಖೆ

## ಮೀನುಗಾರಿಕೆ ಉಪನಿರ್ದೇಶಕರ ಕಛೇರಿ, ಬೆಂಗಳೂರು ವಲಯ, ಬೆಂಗಳೂರು-9

## ಸಾರ್ವಜನಿಕ ಪ್ರಕಟಣೆ ಸಂ: ಎಫ್‌ವೈಪಿ/3/2002-03 ದಿನಾಂಕ: 22ನೇ ಡಿಸೆಂಬರ್ 2004

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ಸೆಕ್ಷನ್ 7(1) ರಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಮತ್ತು ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ.

| ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|
| ಮೀನುಗಾರಿಕೆ ಉಪ ನಿರ್ದೇಶಕರು, ಬೆಂಗಳೂರು ವಲಯ, ಬೆಂಗಳೂರು | ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು. |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿರುವ ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

1) ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯದ ವಿವರಗಳು

ಮೀನುಗಾರಿಕೆ ಉಪನಿರ್ದೇಶಕರು, ಬೆಂಗಳೂರು ಇವರು ವಿಭಾಗ ಮಟ್ಟದ ಅಧಿಕಾರಿಯಾಗಿದ್ದು ಇವರ ಆಡಳಿತ ವ್ಯಾಪ್ತಿಗೆ ಬೆಂಗಳೂರು (ಗ್ರಾಮಾಂತರ), ಬೆಂಗಳೂರು(ನಗರ), ತುಮಕೂರು ಮತ್ತು ಕೋಲಾರ ಜಿಲ್ಲೆಗಳು ಒಳಪಟ್ಟಿರುತ್ತದೆ. ಈ ನಾಲ್ಕು ಜಿಲ್ಲೆಗಳ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ಹಾಗೂ ಈ ವಲಯದ ನೇರ ವ್ಯಾಪ್ತಿಗೆ ಬರುವ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ಬೇತಮಂಗಲ ತರಬೇತಿ ಕೇಂದ್ರ, ಮೀನು ಮರಿ ಉತ್ಪಾದನಾ ಮತ್ತು ಪಾಲನಾ ಕೇಂದ್ರಗಳ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಹೆಸರಘಟ್ಟ, ಮಾರ್ಕೋನಹಳ್ಳಿ, ತಿಪ್ಪಗಾನಹಳ್ಳಿ ಮತ್ತು ಶಿಡ್ಲಘಟ್ಟದ ಅಧಿಕಾರಿಗಳು ಮೀನುಗಾರಿಕೆ ಅಭಿವೃದ್ಧಿ ಮತ್ತು ಆಡಳಿತ ವಿಷಯಕ್ಕೆ ಸಂಬಂಧಿಸಿದ ಕೆಲಸ ಕಾರ್ಯಗಳಲ್ಲಿ ಸಹಕಾರ ನೀಡುತ್ತಿರುವರು. ಈ ಕಛೇರಿಯಲ್ಲಿ ಇವರ ಕೆಲಸ ಕಾರ್ಯಗಳ ಬಗ್ಗೆ ಸಹಕರಿಸಲು ಆಡಳಿತ ವಿಷಯಕ್ಕೆ ಸಂಬಂಧಿಸಿದಂತೆ ಒಬ್ಬರು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಆಡಳಿತ) ಇರುತ್ತಾರೆ. ಮೀನುಗಾರಿಕೆ ಉಪನಿರ್ದೇಶಕರು, ಬೆಂಗಳೂರು ಕಛೇರಿಯಲ್ಲಿ ಅವರಲ್ಲದೇ ಈ ಕೆಳಕಂಡಂತೆ ಸಿಬ್ಬಂದಿ ವ್ಯವಸ್ಥೆಯಿದೆ.

| ಕ್ರ.ಸಂ. | ಸಿಬ್ಬಂದಿ ವಿವರ | ಮಂಜೂರಾದ ಹುದ್ದೆಗಳ ಸಂಖ್ಯೆ | ಹುದ್ದೆಗಳಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿರುವವರ ಸಂಖ್ಯೆ |
|---|---|---|---|
| 1. | ಪ್ರಥಮ ದರ್ಜೆ ಸಹಾಯಕರು | 3 | 2 |
| 2. | ದ್ವಿತೀಯ ದರ್ಜೆ ಸಹಾಯಕರು | 3 | 3 |
| 3. | ಶೀಘ್ರಲಿಪಿಗಾರರು | 1 | 1 |
| 4. | ಬೆರಳಚ್ಚುಗಾರರು | 1 | 1 |
| 5. | ವಾಹನ ಚಾಲಕರು | 1 | 1 |
| 6. | ಗ್ರೂಪ್-ಡಿ ನೌಕರರು | 3 | 2 |
| | ಒಟ್ಟು | 12 | 10 |

ಈ ಕಛೇರಿಯು ವಲಯ ಮಟ್ಟದ ಕಛೇರಿ ಆಗಿದ್ದು, ಜಿಲ್ಲೆಗಳಲ್ಲಿ ಜಿಲ್ಲಾ ಪಂಚಾಯಿತಿ ವ್ಯಾಪ್ತಿಗೆ ಬರುವ ಇಲಾಖಾ ಕಛೇರಿಗಳ ವಿವರ ಈ ಕೆಳಗಿನಂತೆ ಇರುತ್ತದೆ.

**1) ಬೆಂಗಳೂರು ಗ್ರಾಮಾಂತರ ಜಿಲ್ಲೆ**

2 ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಬೆಂಗಳೂರು (ಗ್ರಾಮಾಂತರ), ಬೆಂಗಳೂರು

3 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ದೊಡ್ಡಬಳ್ಳಾಪುರ

4 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಮಾಗಡಿ

5 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ನೆಲಮಂಗಲ

6 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ರಾಮನಗರ (ನಲ್ಲೀಗುಡ್ಡ)

7 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಚನ್ನಪಟ್ಟಣ

8 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ದೇವನಹಳ್ಳಿ

9 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಹೊಸಕೋಟೆ

10 ಮೀನುಗಾರಿಕೆ ಹಿರಿಯ ಮೇಲ್ವಿಚಾರಕರು, ಕನಕಪುರ

**2) ತುಮಕೂರು ಜಿಲ್ಲೆ**

1 ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ತುಮಕೂರು

2 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಗುಬ್ಬಿ
3 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ತಿಪಟೂರು
4 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಕುಣಿಗಲ್
5 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಚಿಕ್ಕನಾಯಕನಹಳ್ಳಿ
6 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ತುರುವೇಕೆರೆ
7 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಕೊರಟಗೆರೆ
8 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಪಾವಗಡ
9 ಮೀನುಗಾರಿಕೆ ಮೇಲ್ವಿಚಾರಕರು, ಶಿರಾ
10 ಮೀನುಗಾರಿಕೆ ಮೇಲ್ವಿಚಾರಕರು, ಮಧುಗಿರಿ
11 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ತುಮಕೂರು.

**3) ಕೋಲಾರ ಜಿಲ್ಲೆ**

1 ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಕೋಲಾರ
2 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಕೋಲಾರ
3 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಚಿಂತಾಮಣಿ
4 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಶ್ರೀನಿವಾಸಪುರ
5 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಬೇತಮಂಗಲ
6 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಮಾಲೂರು
7 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಗೌರಿಬಿದನೂರು
8 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಚಿಕ್ಕಬಳ್ಳಾಪುರ
9 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಮುಳಬಾಗಲು

**4) ಬೆಂಗಳೂರು ನಗರ ಜಿಲ್ಲೆ**

1 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ಬೆಂಗಳೂರು ನಗರ
2 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಬೆಂಗಳೂರು (ಉತ್ತರ)
3 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಬೆಂಗಳೂರು (ದಕ್ಷಿಣ)
4 ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಆನೇಕಲ್
5 ಮೀನುಗಾರಿಕೆ ಮೇಲ್ವಿಚಾರಕರು, ತಿಪ್ಪಗೊಂಡನಹಳ್ಳಿ.

5) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ಬೆಂಗಳೂರು
6) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ಕೋಲಾರ
7) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ತುಮಕೂರು

ಮೇಲೆ ತಿಳಿಸಿರುವ ಕಛೇರಿಗಳಲ್ಲದೆ ಈ ಕಛೇರಿಯ ನೇರ ವ್ಯಾಪ್ತಿಗೆ ಬರುವ ಇಲಾಖಾ ಕಛೇರಿಗಳ ವಿವರ ಈ ಕೆಳಕಂಡಂತಿದೆ.

1) ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ಬೇತಮಂಗಲ ತರಬೇತಿ ಕೇಂದ್ರ, ಕೋಲಾರ ಜಿಲ್ಲೆ
2) ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ತಿಪ್ಪಗಾನಹಳ್ಳಿ ಮೀನು ಮರಿ ಉತ್ಪಾದನಾ ಕೇಂದ್ರ, ಕೋಲಾರ ಜಿಲ್ಲೆ
3) ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಶಿಡ್ಲಘಟ್ಟ ಮೀನು ಮರಿ ಉತ್ಪಾದನಾ ಕೇಂದ್ರ, ಕೋಲಾರ ಜಿಲ್ಲೆ
4) ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಹೆಸರಘಟ್ಟ ಮೀನು ಮರಿ ಉತ್ಪಾದನಾ ಕೇಂದ್ರ, ಬೆಂಗಳೂರು ನಗರ ಜಿಲ್ಲೆ
5) ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಮಾಕೋನಹಳ್ಳಿ ಮೀನು ಮರಿ ಉತ್ಪಾದನಾ ಕೇಂದ್ರ, ತುಮಕೂರು ಜಿಲ್ಲೆ.

ಮೀನುಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕು, ಜಿಲ್ಲಾ ಹಾಗೂ ವಲಯ ಮಟ್ಟದಲ್ಲಿ ರಾಜ್ಯದ ಮೀನುಗಾರರ ಸಮುದಾಯದ ಅಭಿವೃದ್ಧಿಗಾಗಿ ಮೀನುಗಾರಿಕೆ ಇಲಾಖೆಯಿಂದ ಈ ಕೆಳಗೆ ನಮೂದಿಸಲಾದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

**ಜಿಲ್ಲಾ ವಲಯ ಯೋಜನೆಗಳು**

1) ಮೀನುಮರಿ ಉತ್ಪಾದನೆ, ಪಾಲನೆ ಮತ್ತು ವಿತರಣೆ
2) ಮೀನುಗಾರಿಕೆ ಸಲಕರಣೆ ಕೊಳ್ಳಲು ಸಹಾಯಧನ
3) ವಸ್ತು ಪ್ರದರ್ಶನ ಮತ್ತು ತರಬೇತಿ
4) ಕಟ್ಟಡಗಳ ನಿರ್ಮಾಣ ಹಾಗೂ ದುರಸ್ತಿ
5) ಮೀನುಗಾರರ ಸಹಕಾರಿ ಸಂಘಗಳಲ್ಲಿ ಹೂಡಿಕೆ
6) ಬಾವಿ/ ಹೊಂಡಗಳಲ್ಲಿ ಮೀನು ಅಭಿವೃದ್ಧಿಗಾಗಿ ಸಹಾಯಧನ
7) ಕೇಂದ್ರ ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗೆ ನೆರವು
8) ಒಳನಾಡು ಮೀನುಗಾರಿಕೆ-ಹುಲ್ಲುಗೆಂಡೆ ಮೀನು ಮರಿಗಳಿಗೆ ಸಹಾಯಧನ

**ರಾಜ್ಯ ವಲಯ ಯೋಜನೆಗಳು**

1) ಮೀನುಮರಿ ಉತ್ಪಾದನೆ, ಪಾಲನೆ ಹಾಗೂ ಹಂಚಿಕೆ
2) ಮೀನುಗಾರರಿಗೆ ಮನೆಗಳನ್ನು ನಿರ್ಮಿಸಲು ಮತ್ಸ್ಯಾಶ್ರಯ ಯೋಜನೆಯಡಿ ಸಹಾಯಧನ

3) ಮೀನು ಮಾರಾಟಕ್ಕೆ ಶಾಖ ನಿರೋಧಕ ಪೆಟ್ಟಿಗೆ/ ಸೈಕಲ್/ ಮೊಪೆಡ್/ ತ್ರಿಚಕ್ರ ವಾಹನಗಳನ್ನು ಖರೀದಿಸಲು ಸಹಾಯಧನ

4) ಮೀನುಗಾರರ ಸಂಕಷ್ಟ ಪರಿಹಾರ ನಿಧಿ ಯೋಜನೆ

5) ಬೇತಮಂಗಲ ತರಬೇತಿ ಕೇಂದ್ರದಲ್ಲಿ ಒಳನಾಡು ಮೀನುಗಾರಿಕೆ ಬಗ್ಗೆ ತರಬೇತಿ.

**ಕೇಂದ್ರ ಪುರಸ್ಕೃತ ಯೋಜನೆಗಳು**

1) ಮೀನುಗಾರರ ಸಾಮೂಹಿಕ ಅಪಘಾತ ವಿಮಾ ಯೋಜನೆ

ಮೇಲೆ ತಿಳಿಸಿದ ಯೋಜನೆಗಳಲ್ಲದೆ ನಾಲ್ಕು ಜಿಲ್ಲೆಗಳಿಗೆ ಸಂಬಂಧಿಸಿದಂತೆ ಮುಖ್ಯವಾಗಿ ಕೆರೆ ಮತ್ತು ಜಲಾಶಯಗಳ ಹರಾಜು, ಗುತ್ತಿಗೆ ಮತ್ತು ಪರವಾನಿಗೆ ಹಾಗೂ ಮೀನು ಮರಿ ಉತ್ಪಾದನಾ, ಪಾಲನಾ ಕೇಂದ್ರಗಳಿಗೆ ಸಂಬಂಧಿಸಿದಂತೆ ಮೀನು ಮರಿ ಉತ್ಪಾದನಾ, ಪಾಲನೆ ಮತ್ತು ಹಂಚಿಕೆ ಚಟುವಟಿಕೆಗಳನ್ನು ನಡೆಸಲಾಗುತ್ತಿದೆ. ಒಳನಾಡು ಮೀನುಗಾರಿಕೆ ಅಂಕಿ ಅಂಶಗಳ ಮಾಹಿತಿಯನ್ನು ಇಲಾಖಾಧಿಕಾರಿಗಳು ಸಂಗ್ರಹಿಸುತ್ತಿದ್ದು ಅದನ್ನು ಕ್ರೋಢೀಕರಿಸಿ ಮೀನುಗಾರಿಕೆ ನಿರ್ದೇಶಕರು, ಬೆಂಗಳೂರುರವರಿಗೆ ಒಪ್ಪಿಸಲಾಗುತ್ತಿದೆ.

**ಅಧಿಕಾರಿಗಳು ಮತ್ತು ನೌಕರರ ಕರ್ತವ್ಯಗಳು**

ಈ ವಲಯದಲ್ಲಿನ ತ್ವರಿತಗತಿ ಕಾರ್ಯನಿರ್ವಹಣೆಗಾಗಿ ಈ ಕಛೇರಿ ಆಡಳಿತ ವಿಭಾಗೀಯ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿಷಯ ನಿರ್ವಾಹಕರುಗಳು ನಿರ್ವಹಿಸಬೇಕಾದ ಸಂಕಲನಗಳ ವಿವರದ ಆದೇಶ ಹೊರಡಿಸಲಾಗಿದೆ.

ಈ ಕಛೇರಿಯು ಮೀನುಗಾರಿಕೆ ಉಪನಿರ್ದೇಶಕರ ಮೇಲ್ವಿಚಾರಣೆಯಲ್ಲಿದ್ದು ಅವರ ಅಧೀನದಲ್ಲಿ ಒಬ್ಬರು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಆಡಳಿತ), ಮೂರು ಜನ ಪ್ರಥಮ ದರ್ಜೆ ಸಹಾಯಕರು, ಮೂರು ಜನ ದ್ವಿತೀಯ ದರ್ಜೆ ಸಹಾಯಕರು ಇವರು ಸರ್ಕಾರಿ ಆಡಳಿತ ನಿಯಮಾವಳಿಯಂತೆ ಈ ಕಛೇರಿಯ ದೈನಂದಿನ ಪತ್ರ ವ್ಯವಹಾರ ಹಾಗೂ ಆಡಳಿತ ನಿರ್ವಹಣೆಯ ಜವಾಬ್ದಾರಿ ಹೊಂದಿರುತ್ತಾರೆ. ಅಲ್ಲದೇ ಈ ಕಛೇರಿಯಲ್ಲಿ ಒಬ್ಬರು ಶೀಘ್ರಲಿಪಿಗಾರರು, ಒಬ್ಬರು ಬೆರಳಚ್ಚುಗಾರರು, ಒಬ್ಬರು ವಾಹನ ಚಾಲಕರು ಮತ್ತು ಮೂರು ಜನ ಗ್ರೂಪ್-ಡಿ ನೌಕರರಿರುತ್ತಾರೆ.

**ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣ ಮಟ್ಟಗಳು**

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ವಿಭಾಗದಲ್ಲಿ ನೋಂದಾಯಿಸಿ, ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.

2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.

3) ಆಗಿಂದಾಗ್ಗೆ ಅಧಿಕಾರಿಗಳಿಂದ ವಿಷಯ ನಿರ್ವಾಹಕರ ಮೇಲೆ ತಪಾಸಣೆ ಕಾರ್ಯ

4) ಸರ್ಕಾರವು/ ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು, ಸೂಚನೆಗಳನ್ನು ಪಾಲಿಸುವುದು.

5) ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯಕವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಪತ್ರಗಳನ್ನು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಆಡಳಿತ) ಮತ್ತು ಕಛೇರಿಯ ಮುಖ್ಯಸ್ಥರಿಂದ ಕಿರು ಸಹಿ ಪಡೆದು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ನೀಡಲಾಗುವುದು. ತುರ್ತು ಟಪ್ಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ಕಛೇರಿ ಅಧಿಕಾರಿಗಳ ಆದೇಶದನ್ವಯ ವಿಷಯ ನಿರ್ವಾಹಕರು ಕಛೇರಿಯ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು**

ಇಲಾಖೆಯಿಂದ ಹೊರಡಿಸಲಾಗುವ ಪ್ರಮುಖ ಪ್ರಕಟಣೆ ಹಾಗೂ ಆದೇಶದ ಪ್ರತಿಗಳನ್ನು ಕಛೇರಿಯ ಪ್ರಕಟಣೆ ಫಲಕದಲ್ಲಿ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗುತ್ತದೆ. ಅವುಗಳ ಪ್ರತಿಗಳನ್ನು ಸಂಬಂಧಪಟ್ಟ ಅಧೀನಾಧಿಕಾರಿಗಳಿಗೆ ಕಳುಹಿಸಿ ಅವರ ಕಛೇರಿಯ ಪ್ರಕಟನಾ ಫಲಕದಲ್ಲಿ ಪ್ರಕಟಿಸಲು ಎಲ್ಲಾ ಅಧೀನಾಧಿಕಾರಿಗಳಿಗೆ ಸೂಚನೆಯನ್ನು ನೀಡಲಾಗುತ್ತಿದೆ. ಮೀನುಗಾರಿಕೆಗೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಮಾಹಿತಿಯನ್ನು ಮೀನುಗಾರಿಕೆ ಉಪನಿರ್ದೇಶಕರು, ಬೆಂಗಳೂರುರವರಿಂದ ಮತ್ತು ಜಿಲ್ಲಾ ಮಟ್ಟದ ಅಧಿಕಾರಿಗಳಾದ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ ಹಾಗೂ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-1), ಬೇತಮಂಗಲ ತರಬೇತಿ ಕೇಂದ್ರ ಮತ್ತು ತಾಲ್ಲೂಕು ಮಟ್ಟದ/ ಮೀನು ಮರಿ ಉತ್ಪಾದನಾ ಪಾಲನಾ ಕೇಂದ್ರಗಳ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-2) ರವರಿಂದ ಸಾರ್ವಜನಿಕರು ಪಡೆಯಬಹುದಾಗಿದೆ. ಈ ಕಛೇರಿಯಲ್ಲಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಆಡಳಿತ) ರವರು ಸಾರ್ವಜನಿಕ ಕುಂದುಕೊರತೆ ಸಂಪರ್ಕಾಧಿಕಾರಿಯಾಗಿದ್ದು, ಹೆಚ್ಚಿನ ವಿವರಗಳಿಗೆ ಅವರನ್ನು ಸಂಪರ್ಕಿಸಬಹುದಾಗಿದೆ. ದೂರವಾಣಿ ಸಂಖ್ಯೆ ಹಾಗೂ ವಿಳಾಸ ಈ ಕೆಳಕಂಡಂತಿದೆ.

ಶ್ರೀ ಡಿ. ಶಿವಪ್ರಸಾದ್
ಮೀನುಗಾರಿಕೆ ಸಹಾಯಕ ನಿರ್ದೇಶಕರು (ಆಡಳಿತ)
ಮೀನುಗಾರಿಕೆ ಉಪನಿರ್ದೇಶಕರ ಕಛೇರಿ,
ನಂ. 8, 6ನೇ ಮಹಡಿ, ಮಹಾವೀರ ಕಾಂಪ್ಲೆಕ್ಸ್,
ಕೆಂಪೇಗೌಡ ರಸ್ತೆ, ಬೆಂಗಳೂರು-560 009.
ದೂರವಾಣಿ: 22266637

ಪ್ರತಿ "ತಿಂಗಳ ಪ್ರಥಮ ಶನಿವಾರವು ಸಾರ್ವಜನಿಕ ಕುಂದುಕೊರತೆಗಳನ್ನು ಆಲಿಸುವ ದಿನ"ವಾಗಿದ್ದು, ಸದರಿ ದಿನ ಸಾರ್ವಜನಿಕರು ಖುದ್ದಾಗಿ ಮೀನುಗಾರಿಕೆ ಉಪನಿರ್ದೇಶಕರು ಇವರನ್ನು ಭೇಟಿಯಾಗಿ ತಮ್ಮ ಕುಂದುಕೊರತೆಗಳನ್ನು ತಿಳಿಸಿ ಅದಕ್ಕೆ ಪರಿಹಾರವನ್ನು ಪಡೆಯಬಹುದಾಗಿದೆ.

ಪಿ.ಆರ್.92 ಮೀನುಗಾರಿಕೆ ಉಪನಿರ್ದೇಶಕರು, ಬೆಂಗಳೂರು-560 009.

**ಉತ್ತರ ಕನ್ನಡ ಜಿಲ್ಲಾ ಪಂಚಾಯತ್**

**ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ, ಉತ್ತರ ಕನ್ನಡ, ಕಾರವಾರ**

**ಸಂಖ್ಯೆ: ಇ1:ಮಾ.ಹ.ಅ.ನಿ:63: 2004-05 ದಿನಾಂಕ: 9ನೇ ನವೆಂಬರ್ 2004**

**ವಿಷಯ :** ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** 1. ಸರಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್:56: ಯೋಮಸ: 2002 (2) ದಿನಾಂಕ: 18.7.2002.

2. ಸರಕಾರದ ಅಧಿಸೂಚನೆ ಸಂಖ್ಯೆ: ಇಡಿ:50: ಅ.ಅ.ವಿ: 2002 ದಿನಾಂಕ: 21.10.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2002 ಈಗಾಗಲೇ ಜಾರಿಗೆ ಬಂದಿದ್ದು, ಸದ್ರಿ ಅಧಿನಿಯಮದ ಪ್ರಕಾರ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಚೇರಿಗಳು) ಅಧಿನಿಯಮದ ಸೆಕ್ಷನ್ 2 (ಉ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ಜಿಲ್ಲಾ ಮಟ್ಟದ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಕಂಡ ಅಧಿಕಾರಿಗಳನ್ನು ನೇಮಿಸಲಾಗಿದೆ.

1. ಸಾರ್ವಜನಿಕ ಪ್ರಾಧಿಕಾರ : ಉಪ ನಿರ್ದೇಶಕರ ಕಚೇರಿ (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಉತ್ತರ ಕನ್ನಡ, ಕಾರವಾರ
2. ಸಕ್ಷಮ ಪ್ರಾಧಿಕಾರ : ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಉತ್ತರ ಕನ್ನಡ, ಕಾರವಾರ
3. ಅಪೀಲು ಪ್ರಾಧಿಕಾರ : ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ

ಸರಕಾರದ ಅಧಿನಿಯಮದ ಸೆಕ್ಷನ್ 3 (ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ಕಾಣಿಸಿದಂತೆ 4 ಶೀರ್ಷಿಕೆಗಳಲ್ಲಿ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗೆ ತಿಳಿಯಪಡಿಸಲಾಗಿದೆ.

**ಶೀರ್ಷಿಕೆ-1**

**ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು**

| | | | |
|---|---|---|---|
| 1. | ಶಿಕ್ಷಣಾಧಿಕಾರಿಗಳು | : | 2 ಹುದ್ದೆಗಳು |
| 2. | ವಿಷಯ ಪರಿವೀಕ್ಷಣಾಧಿಕಾರಿಗಳು | : | 5 ಹುದ್ದೆಗಳು |
| 3. | ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು | : | 1 ಹುದ್ದೆ |
| 4. | ಪತ್ರಾಂಕಿತ ಸಹಾಯಕರು | : | 1 ” |
| 5. | ವೃತ್ತಿ ವಿಷಯ ಪರಿವೀಕ್ಷಕರು | : | 1 ” |
| 6. | ಉರ್ದು ಶಿಕ್ಷಣ ಸಂಯೋಜಕರು | : | 1” |
| 7. | ಮರಾಠಿ ಶಿಕ್ಷಣ ಸಂಯೋಜಕರು | : | 1” |
| 8. | ವ್ಯವಸ್ಥಾಪಕರು | : | 1 ” |
| 9. | ಅಧೀಕ್ಷಕರು | : | 4 ಹುದ್ದೆಗಳು |
| 10. | ಸಹಾಯಕ ಸಾಂಖ್ಯಿಕ ಅಧಿಕಾರಿಗಳು | : | 1 ಹುದ್ದೆ |
| 11. | ಪ್ರಥಮ ದರ್ಜೆ ಸಹಾಯಕರು | : | 10 ಹುದ್ದೆಗಳು |
| 12. | ಶೀಘ್ರಲಿಪಿಗಾರರು | : | 1 ಹುದ್ದೆ |
| 13. | ದ್ವಿತೀಯ ದರ್ಜೆ ಸಹಾಯಕರು | : | 5 ಹುದ್ದೆಗಳು |
| 14. | ಬೆರಳಚ್ಚುಗಾರರು | : | 1 ಹುದ್ದೆ |
| 15. | ದ್ವಿ.ದ.ಸ. ಸಹಿತ ಬೆರಳಚ್ಚುಗಾರರು | : | 1 ಹುದ್ದೆ |
| 16. | ವಾಹನ ಚಾಲಕರು | : | 1 |
| 17. | ‘ಡಿ’ ದರ್ಜೆ ನೌಕರರು | : | 12 |

ಈ ಕಚೇರಿ ಅಧೀನದಲ್ಲಿ ಜಿಲ್ಲೆಯ 11 ತಾಲ್ಲೂಕುಗಳಲ್ಲಿ ತಾಲೂಕಾ ಮಟ್ಟದ ಕಚೇರಿಗಳು ಕಾರ್ಯನಿರ್ವಹಿಸುತ್ತಿವೆ.

| | | | | |
|---|---|---|---|---|
| 1. | ಕಾರವಾರ | - | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಚೇರಿ | ಕಾರವಾರ |
| 2. | ಅಂಕೋಲಾ | - | -”- | ಅಂಕೋಲಾ |
| 3. | ಕುಮಟಾ | - | -”- | ಕುಮಟಾ |
| 4. | ಹೊನ್ನಾವರ | - | -”- | ಹೊನ್ನಾವರ |
| 5. | ಭಟ್ಕಳ | - | -”- | ಭಟ್ಕಳ |
| 6. | ಸಿರ್ಸಿ | - | -”- | ಸಿರ್ಸಿ |
| 7. | ಸಿದ್ದಾಪುರ | - | -”- | ಸಿದ್ದಾಪುರ |
| 8. | ಯಲ್ಲಾಪುರ | - | -”- | ಯಲ್ಲಾಪುರ |
| 9. | ಮುಂಡಗೋಡ | - | -”- | ಮುಂಡಗೋಡ |
| 10. | ಹಳಿಯಾಳ | - | -”- | ಹಳಿಯಾಳ |
| 11. | ಜೋಯಡಾ | - | -”- | ಜೋಯಡಾ |

ಪ್ರಾಥಮಿಕ ಮತ್ತು ಪ್ರೌಢ ಶಾಲಾ ಮಟ್ಟದವರೆಗೆ ಶಿಕ್ಷಣ ವಿದ್ಯಾರ್ಥಿ: ವಿದ್ಯಾರ್ಥಿನಿಯರಿಗೆ ಒದಗಿಸುವುದು ಇಲಾಖೆಯ ಗುರಿಯಾಗಿರುತ್ತದೆ. ಜಿಲ್ಲಾ ಮಟ್ಟದ ಈ ಕಚೇರಿಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ನೀಡುವ ಶಿಕ್ಷಣ ಸಂಸ್ಥೆಗಳ ನಿಯಂತ್ರಣ ಹೊಂದಿರುತ್ತದೆ. ಜಿಲ್ಲೆಯಲ್ಲಿನ 11 ಕ್ಷೇತ್ರ ಶಿಕ್ಷಣಾಧಿಕಾರಿಗಳ ವಲಯ ಮಟ್ಟದ ಕಚೇರಿಗಳ ಮೂಲಕ ಸರಕಾರದ ಯೋಜನೆಗಳನ್ನು ಶಾಲಾ ಮಟ್ಟದಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ.

ಸರ್ವ ಶಿಕ್ಷಣ ಅಭಿಯಾನ ಕಚೇರಿಯಲ್ಲಿ ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ:

| | | | |
|---|---|---|---|
| 1. | ಉಪ ಯೋಜನಾ ಸಮನ್ವಯಾಧಿಕಾರಿ | : | 1 ಹುದ್ದೆ |
| 2. | ಸಹಾಯಕ ಯೋಜನಾ ಸಮನ್ವಯಾಧಿಕಾರಿ | : | 2 ಹುದ್ದೆಗಳು |
| 3. | ಲೆಕ್ಕ ಅಧೀಕ್ಷಕರು | : | 1 ಹುದ್ದೆ |
| 4. | ಪ್ರ.ದ. ಸಹಾಯಕ | : | 2 ಹುದ್ದೆಗಳು |
| 5. | ಪ್ರೋಗ್ರಾಮರ್ | : | 1 ಹುದ್ದೆ |

6. ಡಾಟಾ ಎಂಟ್ರಿ ಆಪರೇಟರ್ : 2 ಹುದ್ದೆಗಳು
7. 'ಡಿ' ದರ್ಜೆ ನೌಕರರು : 1 ಹುದ್ದೆ

ಜಿಲ್ಲಾ ಪಠ್ಯಪುಸ್ತಕ ಮಳಿಗೆಯಲ್ಲಿ ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1. ಪ್ರಥಮ ದರ್ಜೆ ಸಹಾಯಕರು : 1 ಹುದ್ದೆ
2. 'ಡಿ' ದರ್ಜೆ ನೌಕರರು : 2 ಹುದ್ದೆಗಳು

ಜಿಲ್ಲಾ ಪಠ್ಯಪುಸ್ತಕ ಮಳಿಗೆಯಲ್ಲಿ ಸರಕಾರದ ಮುದ್ರಣಾಲಯದಿಂದ ಸರಬರಾಜು ಮಾಡುವ ಪಠ್ಯಪುಸ್ತಕಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೂಲಕ ಶಾಲೆಗಳಿಗೆ 1 ರಿಂದ 10ನೇ ತರಗತಿಯ ವಿದ್ಯಾರ್ಥಿಗಳಿಗೆ ವಿತರಣೆ ಮಾಡಲಾಗುವುದು.

ಜಿಲ್ಲೆಯಲ್ಲಿ 11 ತಾಲ್ಲೂಕು ಸಮನ್ವಯಾಧಿಕಾರಿಗಳು ಕ್ಷೇತ್ರ ಮಟ್ಟದ ಕಚೇರಿಗಳ ಮೂಲಕ ಸರಕಾರದ ಯೋಜನೆಗಳನ್ನು ಶಾಲಾ ಮಟ್ಟದಲ್ಲಿ ಅನುಷ್ಠಾನಗೊಳಿಸಲಾಗುತ್ತದೆ.

**ಸಾಂಸ್ಥಿಕ ರಚನೆ:**

ಉಪನಿರ್ದೇಶಕರು (ಆಡಳಿತ) ಮತ್ತು ಯೋಜನಾ ಸಮನ್ವಯಾಧಿಕಾರಿಗಳು, ಸರ್ವ ಶಿಕ್ಷಣ ಅಭಿಯಾನ ಹಾಗೂ ಪದನಿಮಿತ್ತ ಉಪನಿರ್ದೇಶಕರು, ಪಠ್ಯಪುಸ್ತಕ ಮಳಿಗೆ




**ಶೀರ್ಷಿಕೆ-2**

ಅಧಿಕಾರಿಗಳು ಮತ್ತು ನೌಕರರು ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಕೊಳ್ಳುವಲ್ಲಿ ಅನುಸರಿಸುವ ಕಾರ್ಯ ವಿಧಾನ:

ಶೀರ್ಷಿಕೆ (1) ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಸಾರ್ವಜನಿಕ ಶಿಕ್ಷಣ ಇಲಾಖೆ, ಜಿಲ್ಲಾ ಉಪನಿರ್ದೇಶಕರು (ಆಡಳಿತ) ಕಚೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಜಿಲ್ಲಾ ಮಟ್ಟದಲ್ಲಿ ಉಪನಿರ್ದೇಶಕರು (ಆಡಳಿತ) ಇವರು ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರಿಯಾಗಿರುತ್ತಾರೆ.

ಜಿಲ್ಲಾ ಉಪನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಕಚೇರಿಯಲ್ಲಿ ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳು ಈ ಕೆಳಗಿನಂತಿವೆ.

**ಆಡಳಿತ ವಿಭಾಗ:**

1. ಒಂದನೇ ಮತ್ತು 2ನೇ ವರ್ಗದ ಪತ್ರಾಂಕಿತ ಅಧಿಕಾರಿಗಳ ಬಡ್ತಿ, ನಿಯೋಜನೆ, ಪ್ರೌಢಶಾಲಾ ಶಿಕ್ಷಕರ: ಶಿಕ್ಷಕೇತರ ನೇಮಕಾತಿ, ವರ್ಗಾವಣೆ, ಬಡ್ತಿ, ನಿಯೋಜನೆ, ಲಿಪಿಕ ಸಿಬ್ಬಂದಿಯವರ ನೇಮಕಾತಿ, ಖಾಯಂ ಪೂರ್ವ ಸೇವಾವಧಿ ಘೋಷಣೆ ಬಡ್ತಿ, ವರ್ಗಾವಣೆ, ನಿಯೋಜನೆ, ನಿಯಮ-32ರಡಿ ಕಾರ್ಯನಿರ್ವಹಿಸುವ ಅಧಿಕಾರಿಗಳ ಹಾಗೂ ಸಿಬ್ಬಂದಿ ಸೇವಾ ಪುಸ್ತಕ, ರಜಾ ಮಂಜೂರಾತಿ ನಿರ್ವಹಣೆ ಇತ್ಯಾದಿ.
2. ಹೊಸ ಪ್ರೌಢ ಶಾಲೆ ಮಂಜೂರಿ, ಸರಕಾರಿ ಪ್ರೌಢ ಶಾಲೆ ಉನ್ನತೀಕರಣ, ಹೆಚ್ಚಿನ ವಿಭಾಗ ಅನುಮತಿ ನೀಡುವುದು.
3. ಅನುಕಂಪದ ಆಧಾರದ ಮೇಲೆ ನೇಮಕದ ಕುರಿತು.
4. ಪ್ರಾಥಮಿಕ ಶಾಲಾ ಶಿಕ್ಷಕರ ಆಯ್ಕೆ, ನೇಮಕಾತಿ, ಜೇಷ್ಠತಾ ಪಟ್ಟಿ ಪ್ರಕಟಣೆ, ಬಡ್ತಿ ನಿಯೋಜನೆ, ರಾಜಿನಾಮೆ, ನಿವೃತ್ತಿ, ಸ್ವಇಚ್ಛಾ ನಿವೃತ್ತಿ ಇತ್ಯಾದಿ.
5. ಹೊಸದಾಗಿ ಸರಕಾರಿ ಪ್ರಾಥಮಿಕ ಶಾಲೆಗಳನ್ನು ಮಂಜೂರು ಮಾಡುವುದು, ಕಿರಿಯ ಪ್ರಾಥಮಿಕ ಶಾಲೆಗಳನ್ನು ಉನ್ನತೀಕರಿಸುವ ಕಾರ್ಯ
6. ಸರಕಾರಿ ಪ್ರಾಥಮಿಕ: ಪ್ರೌಢ: ಕಚೇರಿ ಸಿಬ್ಬಂದಿಗಳ: ಅಧೀನ ಕಚೇರಿ ಸಿಬ್ಬಂದಿಗಳ, ಪತ್ರಾಂಕಿತ ಅಧಿಕಾರಿಗಳ ಮೇಲಿನ ದೂರು: ವಿಚಾರಣೆ: ಶಿಸ್ತು ಕ್ರಮ ಇತ್ಯಾದಿ.
7. ಅನಧಿಕೃತ ಗೈರುಹಾಜರಿ ಹಾಗೂ ಶಿಸ್ತು ಕ್ರಮ ಜರುಗಿಸುವುದು.
8. ಹೆಸರು, ಜಾತಿ, ಜನ್ಮದಿನಾಂಕ ಬದಲಾವಣೆ ಪ್ರಕರಣಗಳಿಗೆ ಸಂಬಂಧಪಟ್ಟ ನ್ಯಾಯಾಲಯ ಪ್ರಕರಣಗಳು
9. ಎಸ್.ಎಸ್.ಎಲ್. ಸಿ. ಹಾಗೂ ಇತರೆ ಪರೀಕ್ಷೆಗಳು.
10. ಮೆರಿಟ್ ಶಿಷ್ಯವೇತನ, ಸೈನಿಕ ಮಕ್ಕಳಿಗೆ ಹಾಗೂ ನಿವೃತ್ತ ಶಿಕ್ಷಕರ ಮಕ್ಕಳಿಗೆ ಕೊಡುವ ಶಿಷ್ಯವೇತನಗಳು.

11. ವಿದ್ಯಾರ್ಥಿಗಳ ಫೀ ಶುಲ್ಕ ಮರುಪಾವತಿ
12. ಅಧಿಕಾರಿ ಮತ್ತು ಸಿಬ್ಬಂದಿಯವರ ಪ್ರಭಾರ ಭತ್ಯೆ ಮಂಜೂರಾತಿ
13. ಹೊರದೇಶ, ಹೊರರಾಜ್ಯ, ಕೇಂದ್ರ ಮಾದರಿಯ ಶಾಲೆಯಿಂದ ಬಂದಿರುವ ವಿದ್ಯಾರ್ಥಿಗಳಿಗೆ ಪ್ರೌಢ ಶಾಲಾ ದಾಖಲಾತಿಗೆ ಅನುಮತಿ.
14. ಉನ್ನತ ವ್ಯಾಸಂಗಕ್ಕೆ ಅನುಮತಿ
15. ಬಿ.ಇ.ಓ., ವಿಷಯ ಪರಿವೀಕ್ಷಕರು, ಶಿಕ್ಷಣಾಧಿಕಾರಿಗಳ ಮತ್ತು ಶಾಲಾ ತನಿಖಾಧಿಕಾರಿಗಳ ಪ್ರವಾಸ ಕಾರ್ಯಕ್ರಮ, ಪ್ರವಾಸ ದಿನಚರಿ ಪರಿಶೀಲನೆ ಹಾಗೂ ಅನುಮೋದನೆ.
16. ಚುನಾವಣೆ ಮತ್ತು ಗಣತಿಗೆ ಸಂಬಂಧಿಸಿದ ಎಲ್ಲ ವ್ಯವಹಾರ.
17. ಪ್ರಾಥಮಿಕ, ಪ್ರೌಢ ಶಾಲೆಗಳ ಎಲ್ಲಾ ವರ್ಗದ ಸಿಲೇಬಸ್ ವಿಷಯ ಹಾಗೂ ಇತರೆ ಶೈಕ್ಷಣಿಕ ವಿಷಯ.
18. ಎಲ್ಲಾ ಸರಕಾರಿ ಸಂಸ್ಥೆಗಳ ಕಟ್ಟಡಗಳ ನಿರ್ಮಾಣ ಹಾಗೂ ದುರಸ್ತಿ, ಕುಡಿಯುವ ನೀರು, ಶೌಚಾಲಯ, ಜಮೀನು, ಭೂ ಸ್ವಾಧೀನತೆ ಇತ್ಯಾದಿ.
19. ಇಲಾಖೆಯ ಕಕ್ಷೆಯಲ್ಲಿ ಬರುವ ಎಲ್ಲಾ ತರಹದ ಸರಕಾರಿ ಶಾಲೆಗಳು ಹಾಗೂ ಕಚೇರಿಗಳ ಬಾಡಿಗೆ ಕಟ್ಟಡ ಪಡೆಯುವ ಹಾಗೂ ಇತರೆ ಕಾರ್ಯ.
20. ಸಿಬ್ಬಂದಿ: ಅಧಿಕಾರಿಗಳನ್ನು ತರಬೇತಿಗೆ ನಿಯೋಜಿಸುವ ಕಾರ್ಯ
21. ಎಂ.ಎಂ. ಆರ್. ವರದಿಗಳ ತಯಾರಿಕೆ.
22. ವಾರ್ಷಿಕ ಯೋಜನೆ ಕರಡು ಹಾಗೂ ವಾರ್ಷಿಕ ಯೋಜನೆಯ ಕ್ರಿಯಾ ಯೋಜನೆ ತಯಾರಿ, ಯೋಜನೆಗಳ ಅನುಷ್ಠಾನದಲ್ಲಿ ಪೀಠೋಪಕರಣ ಹಾಗು ಕಲಿಕಾ ಸಾಮಗ್ರಿ ಸಾಧನ ಸಾಮಗ್ರಿ ಜಿಲ್ಲಾ ಯೋಜನೆಗಳ ಕಾರ್ಯ.
23. ಅಧೀನ ಕಚೇರಿಗೆ ಹಾಗೂ ಈ ಕಚೇರಿಗಳಿಗೆ ಪೀಠೋಪಕರಣ ಪೂರೈಕೆ.
24. ಮಾಹಿತಿ ಸಿಂಧು ಯೋಜನೆ ಕಾರ್ಯಕ್ರಮ.

**ಲೆಕ್ಕಪತ್ರ ವಿಭಾಗ:**

1. ಕಚೇರಿ ಸಿಬ್ಬಂದಿ ವೇತನ, ಮುಂಗಡ ಕಟಾವಣೆ
2. ಕಚೇರಿಯ ಸರಕಾರಿ ಹಾಗೂ ಸರಕಾರೇತರ ಕೀರ್ದಿ ನಿರ್ವಹಿಸುವುದು.
3. ಕೆ.ಜಿ. ಅಯ್ ಡಿ., ಗ್ರೂಪ್ ಇನ್ಸುರೆನ್ಸ್, ಕುಟುಂಬ ಕಲ್ಯಾಣ ನಿಧಿಯ ಕಾರ್ಯನಿರ್ವಹಣೆ
4. ಕಚೇರಿಯ ಸಾದಿಲ್ವಾರು ಬಿಲ್ಲು, ಈ ಕಚೇರಿಯಿಂದ ಮಾಡಬೇಕಾದ ಎಲ್ಲ ತರಹದ ಎ.ಸಿ.:ಡಿ.ಸಿ. ಬಿಲ್ಲುಗಳು ಹಾಗೂ ವೋಚರ್ ಕಾಯ್ದಿರಿಸುವಿಕೆ.
5. ಸ್ಕೂಲ್ ಬೋರ್ಡ್ ಕಾಲದ ಎಂಡೋಮೆಂಟ್ ಫಂಡ್ ಲೆಕ್ಕ ಇಡುವುದು ಹಾಗೂ ಪಿ.ಪಿ. ಎಕೌಂಟ್ ಲೆಕ್ಕ ಇಡುವುದು.
6. ವೈದ್ಯಕೀಯ ವೆಚ್ಚದ ಮರುಪಾವತಿ.
7. ಯೋಜನೆ: ಯೋಜನೇತರ ಆಯವ್ಯಯ ತಯಾರಿಕೆ, ಖರ್ಚಿನ ತಃಖ್ತೆ ಕಾರ್ಯ
8. ಅಧಿಕಾರಿ: ಶಿಕ್ಷಕ: ಶಿಕ್ಷ ಕೇತರ ಎಲ್ಲಾ ತರಹದ ವೇತನ ನಿಗದಿಪ್ರಕರಣ, ಹೈದರಾಬಾದ್ ವೇತನ ಶ್ರೇಣಿ ನಿಗದಿ ಕಾರ್ಯ.
9. ಅಧೀನ ಕಚೇರಿಗಳ ಎಲ್ಲಾ ಸಾದಿಲ್ವಾರು ಬಿಲ್ಲುಗಳ ಮೇಲುರುಜು ಮಾಡುವ ಕಾರ್ಯ
10. ಸರಕಾರಿ ನೌಕರರ ಹಾಗೂ ಅನುದಾನಿತ ಶಾಲೆಗಳ ನೌಕರರ ನಿವೃತ್ತಿವೇತನ, ವೇತನ ಪ್ರಸ್ತಾವನೆ ತಯಾರಿಕೆ ನಿರ್ವಹಣೆ.
11. ಜಿ.ಪಿ.ಎಫ್. ಅನುದಾನ ಮಂಜೂರು.
12. ಸರಕಾರಿ ನೌಕರರ ನಿವೃತ್ತರಾಗುವವರ ಯಾದಿ ತಯಾರಿಸುವುದು.
13. ಈ ಕಚೇರಿಯ ಪತ್ರಾಂಕಿತ ಅಧಿಕಾರಿಗಳ ಪ್ರವಾಸ ಭತ್ಯೆ ಬಿಲ್ಲು ಮೇಲುರುಜು ಮಾಡುವ ಕಾರ್ಯ
14. ಕರಿಹಲಗೆ ಯೋಜನೆಯಡಿ ಪ್ರಾಥಮಿಕ ಶಾಲಾ ಕೊಠಡಿಗಳ ನಿರ್ಮಾಣ, ಕಲಿಕಾ ಮತ್ತು ಬೋಧನಾ ಸಾಮಗ್ರಿಗಳ ಸರಬರಾಜು.

**ಅನುದಾನ ವಿಭಾಗ:**

1. ಎಲ್ಲಾ ಖಾಸಗಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ನೇಮಕಾತಿ, ಅನುಮೋದನೆ, ವರ್ಗಾವಣೆ, ಮಾನ್ಯತೆ ನವೀಕರಣ, ಹೆಚ್ಚಿನ ವಿಭಾಗ ತೆರೆಯುವ ಬಗ್ಗೆ ಇತ್ಯಾದಿ.
2. ಅನುದಾನಿತ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಕರ ಸಿಬ್ಬಂದಿಯವರ ವೇತನ ನಿಗದಿ, ಕಾಲಮಿತಿ ಬಡ್ತಿ ಇತ್ಯಾದಿ
3. ಅನುದಾನಿತ: ಅನುದಾನರಹಿತ ಶಾಲೆಗಳ ತಪಾಸಣಾ ವರದಿ ಪರಿಶೀಲನೆ.
4. ಅನುದಾನಿತ ಪ್ರಾಥಮಿಕ: ಪ್ರೌಢ ಶಾಲೆಗಳ ಸಿಬ್ಬಂದಿಗಳ ನಿವೃತ್ತಿ ಆದೇಶ ಹೊರಡಿಸುವುದು.
5. ಪೂರ್ವ ಪ್ರಾಥಮಿಕ, ಸಂಸ್ಕೃತ, ವ್ಯಾಯಾಮ, ಬೆರಳಚ್ಚು, ಅರೇಬಿಕ್, ಹಿಂದಿ, ಸ್ಪೆಷಲ್ ಶಾಲೆಗಳ ಎಲ್ಲ ವ್ಯವಹಾರ.

**ಸಾಮಾನ್ಯ ವಿಭಾಗ:**

1. ವಿದ್ಯಾರ್ಥಿಗಳಿಗೆ ಮಧ್ಯಾಹ್ನ ಉಪಹಾರ ಯೋಜನೆ, ಉಚಿತ ಸಮವಸ್ತ್ರ, ಶಾಲಾಬ್ಯಾಗ್ ನಿರ್ವಹಣೆ.
2. ಕಚೇರಿ ತಪಾಸಣಾ ಪಾಲನಾ ವರದಿ ಹಾಗೂ ಮಹಾಲೇಖಪಾಲರ ಆಡಿಟ್ ನಿರ್ವಹಣೆ
3. ಕೆ.ಡಿ.ಪಿ. ವರದಿ ತಯಾರಿಕೆ.
4. ಜಿಲ್ಲೆಯ ಅಂಕಿಸಂಖ್ಯೆ ಕ್ರೋಢೀಕರಣ ಕಾರ್ಯ
5. ರಾಷ್ಟ್ರೀಯ ದಿನಾಚರಣೆ, ಶಿಕ್ಷಕರ ದಿನಾಚರಣೆ, ರಾಜ್ಯೋತ್ಸವ ಇತರೆ ಕಾರ್ಯಕ್ರಮಗಳ ನಿರ್ವಹಣೆ.
6. ಬಾವುಟಗಳ ಲೆಕ್ಕ ಹಾಗೂ ಪತ್ರ ವ್ಯವಹಾರ
7. ಸ್ಪರ್ಧೆಗಳು, ವಿಜ್ಞಾನ ಪ್ರದರ್ಶನಗಳು ಹಾಗೂ ಇತ್ಯಾದಿ ಪ್ರದರ್ಶನಗಳು
8. ಅಧೀನ ಕಚೇರಿಗಳ ಪಾಲನಾ ವರದಿ ತಯಾರಿಸಿ ಸಲ್ಲಿಸುವುದು
9. ಕಚೇರಿಯ ಪೀಠೋಪಕರಣಗಳ ಪೂರೈಕೆ, ರಿಪೇರಿ ಕಾರ್ಯ,ದಾಸ್ತಾನು ನಿರ್ವಹಣೆ, ಸಣ್ಣ ಉಳಿತಾಯ ಯೋಜನೆ, ಕುಟುಂಬ ಕಲ್ಯಾಣ ಯೋಜನೆ.

10. ಪ್ರಾಥಮಿಕ: ಪ್ರೌಢ ಶಾಲೆಗಳ ಸಂಚಿತ ನಿಧಿ ಬಳಕೆ ಅನುಮತಿ ನೀಡುವ ಬಗ್ಗೆ.
11. ಬಾಲ ಕಾರ್ಮಿಕರ ಕಡತ ನಿರ್ವಹಣೆ, ದೈಹಿಕ ಶಿಕ್ಷಣ ಸಾಮಗ್ರಿ ಪೂರೈಕೆ, ಶಾಲೆಗಳಿಗೆ ರೇಡಿಯೋ, ಟೇಪ್ ರೆಕಾರ್ಡರ್, ಕ್ಯಾಸೆಟ್, ಟಿ.ವಿ. ಪೂರೈಕೆ.

**ಆಪ್ತ ಶಾಖೆ:**

1. ಉಪನಿರ್ದೇಶಕರ ಆಪ್ತ ಸಹಾಯಕರ ಕೆಲಸ
2. ಜೀಪಿಗೆ ಸಂಬಂಧಿಸಿದ ಪತ್ರ ವ್ಯವಹಾರ
3. ಬಿ.ಇ.ಓ. ಹಾಗೂ ಇತರೆ ಅಧಿಕಾರಿಗಳ ಸಭೆಯನ್ನು ಆಯೋಜಿಸುವುದು.
4. ಮೇಲಾಧಿಕಾರಿಗಳು ಹಾಗೂ ಅವರ ಕಚೇರಿಯ ಅಧಿಕಾರಿಗಳ ಟಿ. ಪಿ. ಇಡುವುದು.
5. ಇಲಾಖೆಗೆ ಸಂಬಂಧಿಸಿದ ನೌಕರರ ಗುಪ್ತ ವರದಿ, ಆಸ್ತಿ ಮತ್ತು ಋಣ ಪಟ್ಟಿ ಇಡುವುದು.

**ಸರ್ವ ಶಿಕ್ಷಣ ಅಭಿಯಾನ ಶಾಖೆ:**

ಸರ್ವ ಶಿಕ್ಷಣ ಅಭಿಯಾನ ಯೋಜನೆಯಡಿ ಈ ಕೆಳಗಿನ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಳ್ಳಲಾಗಿದೆ.

1. ಪ್ರಾಥಮಿಕ ಶಿಕ್ಷಣ ಸಾರ್ವತ್ರೀಕರಣವನ್ನು 2010ರ ವೇಳೆ 6-14 ವಯೋಮಾನದ ಎಲ್ಲಾ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ನೀಡುವುದು.
2. ಈ ಕಾರ್ಯಕ್ರಮದಡಿ ಎಲ್ಲಾ ಶಾಲೆಗಳಿಗೆ ಮೂಲಭೂತ ಸೌಕರ್ಯಗಳಾದ ಶಿಕ್ಷಕರು, ಕೊಠಡಿ, ಕಲಿಕಾ ಸಾಮಗ್ರಿ, ನೀರು ಮತ್ತು ಶೌಚಾಲಯ ಹಾಗೂ ಇತರೆ ಸೌಲಭ್ಯಗಳನ್ನು ಒದಗಿಸುವುದು.
3. ಶಾಲೆಗಳಿಂದ ಹೊರಗುಳಿದ ಮಕ್ಕಳಿಗೆ ವಿಶೇಷ ಕಾರ್ಯಕ್ರಮಗಳ ಮೂಲಕ ಎಲ್ಲಾ ಮಕ್ಕಳು ಶಿಕ್ಷಣ ಪಡೆಯುವ ಯೋಜನೆ ಹಮ್ಮಿಕ್ಕೊಳ್ಳಲಾಗಿದೆ.

**ಪಠ್ಯಪುಸ್ತಕ ಮಳಿಗೆ:**

1. 1 ರಿಂದ 10ನೇ ತರಗತಿವರೆಗಿನ ವಿದ್ಯಾರ್ಥಿಗಳಿಗೆ ಉಚಿತ ಪುಸ್ತಕ ಸರಬರಾಜು ಮಾಡುವುದು.

**ಗಣಕ ವಿಭಾಗ:**

ಕಚೇರಿಯಿಂದ ಗಣಕೀಕರಣಗೊಳ್ಳಬೇಕಾದ ಅಂಕಿಅಂಶ ಕ್ರೋಢೀಕರಣ, ವೇತನದ ಬಿಲ್ಲು ಇತರೆ ವ್ಯವಹಾರ ಪತ್ರಗಳ ಗಣಕೀಕರಣ.

**ಬೆರಳಚ್ಚು ವಿಭಾಗ:**

1. ಈ ಕಚೇರಿಯಿಂದ ಹೊರಡಿಸುವ ಪತ್ರಗಳನ್ನು ಹಾಗೂ ಮಾಹಿತಿಯನ್ನು ಬೆರಳಚ್ಚು ಮಾಡುವುದು.

**ಸ್ವೀಕೃತಿ ಮತ್ತು ರವಾನೆ ವಿಭಾಗ:**

ಕಚೇರಿಗೆ ಬರುವ ಎಲ್ಲ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ವಿಭಾಗದಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಚೇರಿ ಅಧೀಕ್ಷಕರು ಕಿರು ಸಹಿ ಮಾಡಿದ ನಂತರ ಪತ್ರಗಳನ್ನು ನೋಂದಾಯಿಸಿ ಸಂಬಂಧಪಟ್ಟ ವಿಷಯನಿರ್ವಾಹಕರಿಗೆ ನೀಡಿ ಸ್ವೀಕೃತಿ ಪಡೆಯಲಾಗುವುದು.

ಕಚೇರಿಯಿಂದ ರವಾನೆಯಾಗುವ ಎಲ್ಲಾ ಟಪಾಲುಗಳನ್ನು ರವಾನೆ ವಿಭಾಗದಲ್ಲಿ ದಾಖಲಿಸಿ ನಿಗದಿತ ಮೊತ್ತದ ಅಂಚೆಚೀಟಿ ಅಂಟಿಸಿ ಹಾಗೂ ಸ್ಥಳೀಯ ಬಟವಾಡೆ ಆಗಬೇಕಾದ ಟಪಾಲುಗಳನ್ನು ವಹಿಯಲ್ಲಿ ದಾಖಲಿಸಿ ರವಾನೆ ಮಾಡಲಾಗುವುದು.

**ಕಚೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆಯ ವಿವರಗಳು:**

ಕಚೇರಿ ಸಿಬ್ಬಂದಿವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅಧಿಕಾರಿಗಳಿಗೆ ಪೂರಕವಾಗಿ ಸಹಾಯಕವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ ಮೇಲಾಧಿಕಾರಿಗಳ ಕಚೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳು ಹಾಗೂ ಕಚೇರಿ ಅಧೀಕ್ಷಕರ ಕಿರುಸಹಿ ಮಾಡಿಸಿದ ನಂತರ, ಸದ್ರಿ ಪತ್ರಗಳನ್ನು ನೋಂದಾಯಿಸಿ ಸಂಬಂಧಪಟ್ಟ ವಿಷಯನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯನಿರ್ವಾಹಕರು ಕಚೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**ಶೀರ್ಷಿಕೆ -3**

**ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1. ಕಚೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವರು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಕ್ಷೇತ್ರ ಶಿಕ್ಷಣಾಧಿಕಾರಿಗಳ ಮಾಸಿಕ ಸಭೆ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಚೇರಿ ವ್ಯವಸ್ಥಾಪಕರ ಮಾಸಿಕ ಸಭೆ ಏರ್ಪಡಿಸುವರು.
3. ಆಗಿಂದಾಗ್ಗೆ ಪತ್ರಾಂಕಿತ ಸಹಾಯಕರು ಹಾಗೂ ಅಧೀಕ್ಷಕರಿಂದ ವಿಷಯನಿರ್ವಾಹಕರ ಮೇಜು ತಪಾಸಣೆ ಕಾರ್ಯ
4. ಇಲಾಖಾ ಸಂಸ್ಥೆಗಳ ಸಿಬ್ಬಂದಿವರ್ಗದವರನ್ನು ಜಿಲ್ಲಾ ತರಬೇತಿ ಸಂಸ್ಥೆಯಲ್ಲಿ ತರಬೇತಿಗೆ ನಿಯೋಜಿಸುವುದು.
5. ಸರ್ಕಾರವು: ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ಪಾಲಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವುದು.
7. ವಾರ್ಷಿಕ ಕಾರ್ಯನಿರ್ವಹಣಾ ವರದಿಯ ಮೂಲಕ ಇಲಾಖೆಯಲ್ಲಿನ ಅಧಿಕಾರಿಗಳ ಮತ್ತು ನೌಕರರ ಕಾರ್ಯನಿರ್ವಹಣೆಯನ್ನು ಮೌಲ್ಯಮಾಪನ ಮಾಡುವುದು.

**ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ಜಿಲ್ಲಾ ಮಟ್ಟದಲ್ಲಿ ಉಪನಿರ್ದೇಶಕರು (ಆಡಳಿತ) ಇವರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರನ್ನು ಮೇಲ್ಮನವಿ ಪ್ರಾಧಿಕಾರಿಯಾಗಿ, ಅದೇ ರೀತಿ

ತಾಲ್ಲೂಕು ಮಟ್ಟದಲ್ಲಿ, ಕ್ಷೇತ್ರ ಶಿಕ್ಷಣಾಧಿಕಾರಿಯವರನ್ನು ಸಕ್ಷಮ ಪ್ರಾಧಿಕಾರಿಯಾಗಿಯೂ ಉಪನಿರ್ದೇಶಕರು (ಆಡಳಿತ) ಇವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ ನೇಮಿಸಲಾಗಿದೆ.

2. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಯಾವುದೇ ಮಾಹಿತಿ ಆದೇಶಗಳನ್ನು ಸಾರ್ವಜನಿಕರ ಮಾಹಿತಿಗಾಗಿ ನೀಡುವುದು.
3. ಸಾರ್ವಜನಿಕರಿಗೆ ಪ್ರತಿದಿನ ಅಪರಾಹ್ನ 3 ಗಂಟೆಯ ನಂತರ ಕಚೇರಿಗೆ ಪ್ರವೇಶಿಸಲು ಅವಕಾಶವಿದ್ದು, ಉಪನಿರ್ದೇಶಕರನ್ನು ಭೇಟಿ ಮಾಡಿ ಅಹವಾಲುಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆ.
4. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿದ್ದು, ಸಾರ್ವಜನಿಕರು ಅವರಿಗೆ ದೂರು ಸಲ್ಲಿಸಿದಲ್ಲಿ ಅದರ ಬಗ್ಗೆ ತನಿಖೆ ನಡೆಸಿ ಅವರಿಗೆ ನ್ಯಾಯ ಒದಗಿಸಿಕೊಡುವುದು.
5. ಅತೀ ಮುಖ್ಯವಾದ ತುರ್ತಿನ ಮಾಹಿತಿ ಇದ್ದರೆ ಪ್ರಮುಖ ದಿನಪತ್ರಿಕೆಗಳಲ್ಲಿ ಪ್ರಕಟಿಸುವುದು.

**ಜಿ. ಎಸ್. ನಾಯ್ಕ**

ಪಿ.ಆರ್.93 ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಉ.ಕ. ಕಾರವಾರ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**

**ನಂ: ಅಬಕಾರಿ/ಸಿಆರ್ಎಂ/ಡಿಟಿಸಿಆರ್/34/ 2001-02 ದಿನಾಂಕ: 21ನೇ ಡಿಸೆಂಬರ್ 2004**

**ಉಪಸ್ಥಿತರು :** ಶ್ರೀ ಎ. ಎಸ್. ವಿಶ್ವರೂಪ ಕೆ.ಇ.ಎಸ್. ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು :**
ಶ್ರೀ ಅಂತೋನಿ ಜಾನ್ ಜೆ. ಕೆ. ಪೊಲೀಸ್ ಉಪ ನಿರೀಕ್ಷಕರು, ಗ್ರಾಮೀಣ ಪೊಲೀಸ್ ಠಾಣೆ, ಕಾರವಾರ.
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರರವರು ಪ್ರತಿನಿಧಿಸಿರುತ್ತಾರೆ).

**ವಿರುದ್ಧ**

**ಅರ್ಜಿದಾರ:**
1. ಶ್ರೀ ಗಜಾ ತಂದೆ ಚುಡಾಮಣಿ ಬಾನಾವಳಿಕರ, ಸಾ: ಕಾಜುಬಾಗ, ಕೊಂಕಣ ಕಾರ್ವಿವಾಡಾ ಕಾರವಾರ.
(ಶ್ರೀಮತಿ ಸುಮಂಗಲಾ ಸಿ. ನಾಯ್ಕ, ವಕೀಲರು, ಕಾರವಾರ ಇವರು ಪ್ರತಿನಿಧಿಸಿರುತ್ತಾರೆ).

**ತೀರ್ಪು**

1. ದಿನಾಂಕ: 16.05.2001 ರಂದು ಈ ಪ್ರಕರಣದ ಫಿರ್ಯಾದುದಾರರು ಟೌನ್ ಮೊಬೈಲ್ ವಾಹನದಲ್ಲಿ ತನ್ನ ಸಿಬ್ಬಂದಿಯವರೊಂದಿಗೆ ರಾತ್ರಿ ಗಸ್ತು ನಿರ್ವಹಿಸುತ್ತಿದ್ದಾಗ ರಾತ್ರಿ 12.00 ಗಂಟೆಯ ಸಮಯಕ್ಕೆ ಕಾಜುಭಾಗದ ಸಾಗರ ಮತ್ಸ್ಯಾಲಯದ ಹತ್ತಿರ ಬಂದು ತಲುಪಿದಾಗ, ತಮ್ಮ ಜೀಪನ್ನು ನೋಡಿ ತನ್ನ ಸ್ಕೂಟರ್‌ನ್ನು ಅತೀ ವೇಗವಾಗಿ ನಡೆಸುತ್ತಿದ್ದವನನ್ನು ಬೆನ್ನಟ್ಟಿಕೊಂಡು ಹಿಡಿದು ವಿಚಾರಿಸಲಾಗಿ, ತನ್ನ ಹೆಸರು ಗಜಾ ತಂದೆ ಚುಡಾಮಣಿ ಬಾನಾವಳಿಕರ ಎಂದು ತಿಳಿಸಿದಾಗ, ಸದರಿಯವನ ಸ್ಕೂಟರ್ ನೋಂದಣಿ ಸಂಖ್ಯೆ: ಕೆಎ-30/ ಎಚ್-6576 ನೇದನ್ನು ಪರಿಶೀಲಿಸಿದಾಗ ಅದರ ನಡು ಮಧ್ಯದಲ್ಲಿ ಒಂದು ರಟ್ಟಿನ ಬಾಕ್ಸ್ ಇಟ್ಟಿದ್ದು, ಮುಂದಿನ ಬಾಕ್ಸ್ ಮತ್ತು ಪಕ್ಕದ ಬಾಕ್ಸ್‌ನಲ್ಲಿ ಪರಿಶೀಲಿಸಿದಾಗ ಈ ಮೂರು ಸ್ಥಳದಲ್ಲಿ ಗೋವಾ ರಾಜ್ಯದಲ್ಲಿ ತಯಾರಿಸಿದ ವಿನಿಕೋಲಾಸ್ ಪೋರ್ಟ್‌ವೈನ್ ಎಂಬ 750 ಮಿ.ಲೀ.ನ 10 ಸೀಸೆಗಳು ಮತ್ತು 750 ಮಿ.ಲೀ.ನ 5 ಇಂಪೀರಿಯಲ್ ಬ್ಲ್ಯೂವಿಸ್ಕಿ ಎಂಬ ಮದ್ಯದ ಸೀಸೆಗಳು ಹಾಗೂ ಒಂದು ರಟ್ಟಿನ ಬಾಕ್ಸ್‌ನಲ್ಲಿ 180 ಮಿ.ಲೀ.ನ 48 ಗೋಲ್ಡ್ ಕಾಯ್ನ್ ಡಾ: ಬ್ರ್ಯಾಂಡಿ ಎಂಬ ಮದ್ಯದ ಸೀಸೆಗಳನ್ನು ಆರೋಪಿಯು ರಹದಾರಿ ಪತ್ರ ಹೊಂದದೇ ಅನಧಿಕೃತವಾಗಿ ಸಾಗಿಸಿದ್ದು ಕಂಡುಬಂದಿದ್ದರಿಂದ, ಸದರಿ ಮದ್ಯಸಾರದ ಸ್ವತ್ತುಗಳು ಹಾಗೂ ವಾಹನವನ್ನು ಮುಂದಿನ ಕ್ರಮದ ಕುರಿತು ಕಾರವಾರ ಶಹರ ಪೊಲೀಸ್ ಠಾಣೆಗೆ ಫಿರ್ಯಾದು ನೀಡಿದ ಪ್ರಕಾರ ಕಾರವಾರ ಶಹರ ಪೊಲೀಸ್ ಠಾಣೆಯ ಪ್ರ.ಮಾ. ವರದಿ ಸಂಖ್ಯೆ: 107/2001 ದಿನಾಂಕ: 16.05.2001 ರಂತೆ ಪ್ರಕರಣವನ್ನು ದಾಖಲಿಸಿದ್ದು, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32ರ ಪ್ರಕಾರ ಶಿಕ್ಷಾರ್ಹವಾಗಿರುವುದಾಗಿ ತಿಳಿಸಿ, ಜಪ್ತಾದ ಮುದ್ದೆಮಾಲನ್ನು (ಮಾದರಿ ಸೀಸೆಗಳನ್ನು ಹೊರತುಪಡಿಸಿ) ಹಾಗೂ ಗುನ್ನೆಗೆ ಸಂಬಂಧಿಸಿದ ದಾಖಲಾತಿಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿ, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಎ(2) ರನ್ವಯ ಜಪ್ತಿಯಾದ ಸ್ವತ್ತುಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದಕ್ಕಾಗಿ ಪಿ.ಎಸ್.ಐ. ಕಾರವಾರ ಶಹರ ಪೊಲೀಸ್ ಠಾಣೆ ಇವರು ಗುನ್ನೆಗೆ ಸಂಬಂಧಿಸಿದ ಪ್ರ.ಮಾ.ವರದಿ ಮತ್ತು ಪಂಚನಾಮೆಯ ದೃಢೀಕೃತ ನಕಲು ಹಾಗೂ ಸ್ವತ್ತಿನ ಪಟ್ಟಿಯನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

2. ದಿನಾಂಕ: 29.05.2001 ರಂದು ಶ್ರೀಮತಿ ಸುಮಂಗಲಾ ಸಿ. ನಾಯ್ಕ, ವಕೀಲರು, ಕಾರವಾರ ಇವರು ಈ ಪ್ರಾಧಿಕಾರದಲ್ಲಿ ಅರ್ಜಿಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತಿಯಾದ ವಾಹನವು ಗಜಾ ಚುಡಾಮಣಿ ಬಾನಾವಳಿಕರ ಸಾ: ಜೈಲ್‌ರೋಡ್, ಕಾಜುಭಾಗ, ಕಾರವಾರ ಇವರದಾಗಿರುವುದಾಗಿ ತಿಳಿಸಿ, ಸದರಿ ವಾಹನದ ಮೇಲೆ ಹೊರಿಸಿರುವ ಆರೋಪಗಳನ್ನು ಅಲ್ಲಗಳೆದು, ಈ ವಾಹನವನ್ನು ಮಧ್ಯಂತರ ವಶಕ್ಕೆ ತನ್ನ ಕಕ್ಷಿದಾರರಿಗೆ ಬಿಡುಗಡೆ ಮಾಡಲು ವಿನಂತಿಸಿರುತ್ತಾರೆ.

3. ಈ ಪ್ರಕರಣದಲ್ಲಿ ಜಪ್ತಿಯಾದಂತಹ ವಾಹನವನ್ನು ಮತ್ತು ಮದ್ಯದ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕ.ಅ. ಕಾಯ್ದೆ 1965ರ ಕಲಂ 43 (ಬಿ)(1)ಎ ಪ್ರಕಾರ ಕಾರಣಕೇಳಿ ನೋಟೀಸನ್ನು ದಿನಾಂಕ: 20.06.2001 ರಂದು ಅರ್ಜಿದಾರ/ ವಾಹನದ ಮಾಲೀಕರಿಗೆ ಜಾರಿ ಮಾಡಲಾಗಿ, ಅದಕ್ಕೆ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

4. ಈ ಪ್ರಾಧಿಕಾರದ ಆದೇಶ ದಿನಾಂಕ: 20.06.2001 ರಂತೆ ವಾಹನದ ಮಧ್ಯಂತರ ವಶದ ಬಿಡುಗಡೆಯ ಬಗ್ಗೆ ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಿದ ಆದೇಶದ ವಿರುದ್ಧ ಅರ್ಜಿದಾರರು ಮೇಲ್ಮನವಿ ಸಲ್ಲಿಸಿದನ್ವಯ ಮಾನ್ಯ ಸೆಶನ್ಸ್ ನ್ಯಾಯಾಲಯ, ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 97/2001, ದಿನಾಂಕ: 19.07.2001 ರಲ್ಲಿ ಆದೇಶಿಸಿದಂತೆ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ ಸಿಆರ್ಎಂ/ ಡಿಟಿಸಿಆರ್/34/2001-02, ದಿನಾಂಕ: 02.08.2001 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ ಸ್ಕೂಟರ್ ಸಂಖ್ಯೆ: ಕೆಎ-30/ಎಚ್-6576 ನೇದಕ್ಕೆ ರೂಪಾಯಿ 15,000/-ಗಳ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಕೆಲವು ಷರತ್ತುಗಳನ್ನು ವಿಧಿಸಿ, ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ನನ್ನ ಪೂರ್ವಾಧಿಕಾರಿಗಳು ಆದೇಶಿಸಿರುತ್ತಾರೆ.

5. ಪ್ರಕರಣದ ತನಿಖಾಧಿಕಾರಿಗಳು ಪತ್ರ ಸಂಖ್ಯೆ: 1389/2004, ದಿನಾಂಕ: 1.05.2004 ರಂದು ಈ ಪ್ರಾಧಿಕಾರಕ್ಕೆ ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ನಕಲನ್ನು ಮುಂದಿನ ಕ್ರಮಕ್ಕಾಗಿ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿನ ಮದ್ಯಸಾರದ ಅಂಶವು 25 ಸೆಂಟಿಗ್ರೇಡ್‌ಗಳಲ್ಲಿ ಕ್ರಮವಾಗಿ ಶೇಕಡಾ 13.13% ಮತ್ತು 36% ವಿ/ವಿ ಯಷ್ಟು ಇರುತ್ತದೆಯಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

6. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ(1) ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿ.ಆರ್.ಪಿ.ಸಿ ಕಲಂ 207 ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 32 ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ, ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯೂ 1 ರಿಂದ 2 ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ.1 ರಿಂದ 2 ರವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರರಾದ ರತ್ನಾಕರ ತಂದೆ ಶಂಕರ ಗುನಗಿ, ಸಾ: ಗುನಗಿವಾಡಾ, ಬಾಡ ಕಾರವಾರ ಇವರು ಮೃತಪಟ್ಟ ಬಗ್ಗೆ ದಿನಾಂಕ: 23.06.2004 ರಂದು ತನಿಖಾಧಿಕಾರಿಯಿಂದ ವರದಿಯಾದ್ದರಿಂದ ಸದರಿಯವರ ಸಾಕ್ಷ್ಯವನ್ನು ಕೈಬಿಡಲಾಯಿತು. ಪಂಚಸಾಕ್ಷಿ ನಂ. 2 ನೇಯವರಾದ ರತ್ನಾಕರ ಜೈರಾಮ ನಾಯ್ಕ, ಬಾಡ, ಕಾರವಾರ ಇವರು ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ.

7. ಪಿ.ಡಬ್ಲ್ಯೂ-1 ಮತ್ತು 2ನೇಯವರ ಹೇಳಿಕೆಗಳು ಹಾಗೂ ಅಭಿಯೋಜನೆಪರ ಸಲ್ಲಿಸಲಾಗಿದ್ದ ಲಿಖಿತ ದಾಖಲೆಗಳ ಆಧಾರದ ಮೇಲೆ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯೂ-1 ರಂತೆ ಪಡೆದುಕೊಳ್ಳಲಾಯಿತು.

8. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರ ಹಾಗೂ ಅರ್ಜಿದಾರರ ಪರವಾಗಿ ಶ್ರೀಮತಿ ಸುಮಂಗಲಾ ಸಿ. ನಾಯಕ, ವಕೀಲರು ಕಾರವಾರ ರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

**9. ವಿವಾದಾಂಶಗಳು:**

1. ಕಾರವಾರ ತಾಲೂಕಿನ ಕಾಜುಬಾಗದ ಸಾಗರ ಮತ್ಸ್ಯಾಲಯದ ಹತ್ತಿರ ಆರೋಪಿತನು ತನ್ನ ಸ್ಕೂಟರ್ ಸಂಖ್ಯೆ: ಕೆಎ-30/ ಎಚ್-6576 ನೇದರಲ್ಲಿ ಗೋವಾ ರಾಜ್ಯದ ತಯಾರಿಕೆಯ 750 ಮಿ.ಲೀ.ನ 10 ಪೋರ್ಟ್‌ವೈನ್ ಬಾಟ್ಲಿಗಳು, 750 ಮಿ.ಲೀ.ನ ಇಂಪೀರಿಯಲ್ ಬ್ಲ್ಯೂವಿಸ್ಕಿ ಎಂಬ 5 ಬಾಟ್ಲಿಗಳು ಹಾಗೂ 180 ಮಿ.ಲೀ.ನ ಗೋಲ್ಡ್ ಕಾಯ್ನ್ ಡಾ: ಬ್ರ್ಯಾಂಡಿಯ 48 ಬಾಟ್ಲಿಗಳನ್ನು ಆರೋಪಿಯು ಅನಧಿಕೃತವಾಗಿ ಸಾಗಿಸಿ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32 ಮತ್ತು 34 ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಮಾಡಿದ್ದಾರೆಂದು ಅಭಿಯೋಜನೆ ಪಕ್ಷದವರು ನಿಸ್ಸಂಶಯವಾಗಿ ರುಜುವಾತುಪಡಿಸುತ್ತಾರೆಯೇ, ಹೇಗೆ?
2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?
3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**ಉತ್ತರಗಳು**

ಅಂಶ 1 :- ಸಕಾರಾತ್ಮಕವಾಗಿ

ಅಂಶ 2 :- ನಕಾರಾತ್ಮಕವಾಗಿ

ಅಂಶ 3 :- ಸಕಾರಾತ್ಮಕವಾಗಿ

**ಕಾರಣಗಳು:**

10. ಪಿ.ಡಬ್ಲ್ಯೂ 1 ನೇಯವರು ಈ ಪ್ರಕರಣದ ಪಂಚಸಾಕ್ಷಿ ನಂ. 2 ನೇಯವರಾಗಿದ್ದು, ಸದರಿಯವರು ದಿನಾಂಕ: 23.06.2004 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಯಲ್ಲಿ ಪ್ರತಿಕೂಲ ಸಾಕ್ಷ್ಯವನ್ನು ನುಡಿದಿದ್ದರೂ, ತಾನು ಸಹಿ ಮಾಡಿದ್ದನ್ನು ಒಪ್ಪಿಕೊಂಡು ಅದನ್ನು ಗುರ್ತಿಸಿಕೊಂಡಿದ್ದು, ಸದರಿಯವರು ಇಂಗ್ಲೀಷ್‌ನಲ್ಲಿ ಸಹಿ ಮಾಡಿದ್ದನ್ನು ಗಮನಿಸಿದಾಗ ಅವರು ಅಕ್ಷರಸ್ಥರಾಗಿದ್ದು, ಪಂಚನಾಮೆಯನ್ನು ಓದದೇ ಸಹಿ ಮಾಡಿರುವರೆಂಬ ವಾದವನ್ನು ಒಪ್ಪಿಕೊಳ್ಳಲು ಬರುವುದಿಲ್ಲ. ಅಲ್ಲದೇ ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿನಲ್ಲಿ ತಾನೊಬ್ಬ ಸರ್ವೀಸ್‌ನಿಂದ ಡಿಸ್ಚಾರ್ಜ್ ಆಗಿರುವ ಪೊಲೀಸ್ ಕಾನ್ಸ್‌ಟೇಬಲ್ ಎಂದು ನುಡಿದಿರುವುದರಿಂದ ಈ ಸಾಕ್ಷಿಯು ಸ್ಥಳ ಪಂಚನಾಮೆಗೆ ಸಹಿ ಮಾಡಿಯೂ ಸುಳ್ಳು ಸಾಕ್ಷಿ ನುಡಿದಿರುವುದು ವ್ಯಕ್ತವಾಗುತ್ತದೆ. ದುರಾದೃಷ್ಟವಶಾತ್ ಪಂಚಸಾಕ್ಷಿ ನಂ. 1 ನೇಯವರು ಮೃತಪಟ್ಟಿರುವ ಕಾರಣ ಸದರಿ ಸಾಕ್ಷಿದಾರರ ಸಾಕ್ಷಿಯ ಕೊರತೆಯಾಗಿರುತ್ತದೆ.

11. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ಅಂತೋನಿ ಜಾನ್. ಜೆ. ಕೆ. ಸಿ.ಪಿ.ಐ ಹೊನ್ನಾವರ ರವರು ಈ ಪ್ರಾಧಿಕಾರದಲ್ಲಿ ದಿನಾಂಕ: 06.10.2004 ರಂದು ಹಾಜರಾಗಿ ಪಿ.ಡಬ್ಲ್ಯೂ-2 ರಂತೆ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ಈ ಘಟನೆ ಸಂಭವಿಸಿದಾಗ ತಯಾರಿಸಲಾದಂತಹ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ, ಈ ಪ್ರಕರಣದಲ್ಲಿ ತಾನು ಮ್ಯಾಜಿಸ್ಟ್ರೇಟರಿಂದ ಜಪ್ತಿ ವಾರಂಟನ್ನು ಪಡೆದುಕೊಂಡಿರಲಿಲ್ಲವೆಂದೂ, ಈ ಬಗ್ಗೆ ಸಕಾರಣಗಳನ್ನು ದಾಖಲಿಸಿರುವುದಿಲ್ಲವೆಂದೂ, ಅದರ ಅವಶ್ಯಕತೆ ಇರುವುದಿಲ್ಲವೆಂದೂ, ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಆರೋಪಿಗಳು ಬಿಡುಗಡೆಯಾದ ವಿಷಯ ತನಗೆ ತಿಳಿದಿಲ್ಲವೆಂದೂ, ಈ ಪ್ರಕರಣದ ಪಂಚರು ತಮ್ಮ ಖಾಯಂ ಪಂಚರು ಅನ್ನುವುದು ಸರಿಯಲ್ಲವೆಂದೂ, ಪ್ರಕರಣವು ರಾತ್ರಿಯ ಸಮಯದಲ್ಲಿ ನಡೆಯಿತೆಂದೂ, ಆ ದಿನ ತಾವು ಒಟ್ಟೂ ಎಷ್ಟು ಸೀಲ್‌ಗಳನ್ನು ಹಾಕಿದೆವು ಎನ್ನುವುದು ಈಗ ತನಗೆ ನೆನಪಿಲ್ಲವೆಂದೂ, ವಾಹನದ ಮೇಲೆ ಸೀಲನ್ನು ಹಾಕಿಲ್ಲವೆಂದೂ, ಆ ದಿನ ತಾವು ಪೆಟ್ರೋಲಿಂಗ್ ಕರ್ತವ್ಯಕ್ಕೆ ಹೋಗಿರುವುದಿಲ್ಲ ಎನ್ನುವುದು ಸರಿಯಲ್ಲವೆಂದೂ, ಇಂತಹ ಮಾಲುಗಳು ತಮಗೆ ರೇಡಿಗೆ ಹೋದಾಗ ಸಿಗುತ್ತವೆ ಎನ್ನುವುದು ಸರಿಯಲ್ಲವೆಂದೂ, ಆ ದಿವಸ ಈ ಪ್ರಕರಣದ ವಾಹನದಲ್ಲಿ ಸರಾಯಿ ಸಾಗಿಸಲಾಗುತ್ತಿತ್ತು ಎನ್ನುವುದು ಸುಳ್ಳು ಎನ್ನುವುದು ಸರಿಯಲ್ಲವೆಂದೂ, ಜಪ್ತಿಯಾದ ವಾಹನಕ್ಕೂ ಮತ್ತು ಮದ್ಯದ ಸೀಸೆಗಳಿಗೂ ಹಾಗೂ ಆರೋಪಿಗೂ ಯಾವುದೇ ಸಂಬಂಧವಿಲ್ಲವೆನ್ನುವುದು ಸರಿಯಲ್ಲವೆಂದೂ, ವಾರಸುದಾರರಿಲ್ಲದ ಮಾಲನ್ನು ಸೇರಿಸಿ ಅಂಕಿ ಸಂಖ್ಯೆಗಾಗಿ ಸುಳ್ಳು ಪ್ರಕರಣವನ್ನು ಸೃಷ್ಟಿಸಿದ್ದೇವೆ ಎನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ.

**12. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಆರೋಪಿಯು ತಪ್ಪಿಸಿಕೊಳ್ಳಬಹುದೆಂಬ ಅಥವಾ ಮುದ್ದೆ ಮಾಲುಗಳನ್ನು ಪರಭಾರೆ ಮಾಡಬಹುದೆಂಬ ಅನುಮಾನವಿದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಜಪ್ತಿ ವಾರಂಟ್ ಇಲ್ಲದೇ ಶೋಧನೆಗೈಯ್ಯಲು ಅನ್ವೇಷಣಾಧಿಕಾರಿಗಳಿಗೆ ಕ.ಅ. ಕಾಯ್ದೆ 1965ರ ಕಲಂ 54 ರಂತೆ ಅಧಿಕಾರವಿರುತ್ತದೆ. ಜಪ್ತಿ ವಾರೆಂಟ್‌ನ್ನು ಪಡೆದುಕೊಳ್ಳದಿದ್ದುದು ಫಿರ್ಯಾದುದಾರರು ಕ.ಅ.ಕಾಯ್ದೆ ಕಲಂ 52 ಮತ್ತು 54ರ ಉಲ್ಲಂಘನೆಯಾಗುತ್ತದೆಯೇ ಹೊರತು ಇದೇ ಕಾರಣವನ್ನಿಟ್ಟುಕೊಂಡು ಜಪ್ತಿಯನ್ನು ನಿರಾಕರಿಸಲು ಬರಲಾರದು ಈ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠದ ತೀರ್ಪು ಐಎಲ್‌ಆರ್ 2004 ಕೆಎಆರ್ 527 (ಶ್ರೀ ಸೋಮನಾಥ ಕರೇಬೈಲ್ ವಿರುದ್ಧ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ) ರಲ್ಲಿ ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

In the Case of a search of a vessel. raft, vehicle or animal, the offender will undoubtedly have the opportunity to escape if the officer proposing to conduct the search were to approach a Magistrate to obtain a search warrant before actually conducting the search. That is so, particularly when illicit transport of excisable goods more often than not takes place at odd hours of the day and night to avoid detection, Such offenders are nabbed in the course of routine checks or on the basis of source information received by the excise authorities. To say that a search of a vehicle. Vessel, raft or animal can be conducted only after obtaining a warrant may therefore be unrealistic and may potentially defeat the very object underlying the excise legislation. That is because in the case of excisable goods that are in a state of motion, any delay which is implicit in an attempt to get a search warrant will give the Offender the opportunity to escape or destroy the evidence regarding the offence.

Failure to record in black and white what is obvious may not therefore by itself constitute an illegality so as to render the search or the subsequent proceedings based on the same illegal. Such failure may be only procedural irregularity not affecting the validity of the search.

The seizure of the goods while the same were in motion or were capable of being put into motion should sufficiently satisfy the conscience of the law that no prejudice on account of non recording of the reasons for not obtaining warrant has been caused.

ಅಲ್ಲದೇ ಕ್ರಿಮಿನಲ್ ನ್ಯಾಯಾಲಯದಲ್ಲಿ ಆರೋಪಿಯು ನಿರ್ದೋಷಿಯಾಗಿದ್ದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಈ ಬಗ್ಗೆ ನಮ್ಮ ಗೌರವಾನ್ವಿತ ಉಚ್ಚನ್ಯಾಯಾಲಯ ಬೆಂಗಳೂರು ರವರ ತೀರ್ಪು ಡಿ.ಎಸ್. ವಿಜಯಕುಮಾರ ವಿರುದ್ಧ ಡೆಪ್ಯೂಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್, ಹಾಸನ (ಐಎಲ್‌ಆರ್-2002, ಕೆ.ಎಆರ್ 1375) ನೇದರಲ್ಲಿಯೂ ಈ ಕೆಳಗಿನಂತೆ ತೀರ್ಪಾಗಿದೆ. ಈ ಆದೇಶವನ್ನು ಈ ಪ್ರಕರಣದಲ್ಲಿ ಆಧಾರವಾಗಿಟ್ಟುಕೊಳ್ಳಲಾಗಿದೆ.

Rejecting the Contention of the owner of the seized vehicle that non-filing of a criminal case or acquittal of the accused involved in illegal transport of forest produce, takes away the jurisdiction of the Authorised Officers to initiate confiscation proceedings under section 71A, hence confirmed the order of confiscation.

ಪ್ರಕರಣದ ಪಂಚರು ಖಾಯಂ ಪಂಚರು ಎನ್ನುವ ಬಗ್ಗೆ ಯಾವುದೇ ರೀತಿಯ ದಾಖಲೆಗಳಿಲ್ಲ. ಪ್ರಕರಣ ದಾಖಲಾಗಿ ಮೂರೂವರೆ ವರ್ಷಗಳ ನಂತರ ಸದರಿ ಸಾಕ್ಷಿದಾರರು ಸಾಕ್ಷಿ ನುಡಿದಿರುವ ಕಾರಣ ಎಷ್ಟು ಸೀಲ್‌ಗಳನ್ನು ಹಾಕಿದ್ದಾರೆಂಬುದನ್ನು ಸಹಜವಾಗಿ ಮರೆತಿರಬಹುದು. ವಾಹನದ ಮೇಲೆ ಸೀಲ್ ಹಾಕಿರುವ ಬಗ್ಗೆ ಪಂಚನಾಮೆಯಲ್ಲಿ ನಮೂದಾಗಿಲ್ಲ. ಟೌನ್ ಪೆಟ್ರೋಲಿಂಗ್ ಕರ್ತವ್ಯಕ್ಕೆ ಹೋಗಿಲ್ಲವೆನ್ನುವ ಬಗ್ಗೆ ಯಾವುದೇ ದಾಖಲೆಗಳಿಲ್ಲ. ಸಿಬ್ಬಂದಿಗಳೊಂದಿಗೆ ನಿರ್ವಹಿಸಲಾದ ಪೆಟ್ರೋಲಿಂಗ್ ಕರ್ತವ್ಯವನ್ನು ಅಲ್ಲಗಳೆಯಲು ಬರಲಾರದು. ವಾರಸುದಾರರಿಲ್ಲದ ಪ್ರಕರಣಗಳು ದಾಖಲಾದಾಗ ಅಂತಹ ಗುನ್ನೆಗಳ ಬಗ್ಗೆ ಪ್ರಕರಣ ದಾಖಲಿಸಲಾಗುತ್ತಿರುವಾಗ ಇದೇ ಆರೋಪಿಯ ವಿರುದ್ಧ ಈ ಪ್ರಕರಣ ದಾಖಲಿಸಲು ಫಿರ್ಯಾದಿ ಕಡೆಯವರಿಗೂ ಮತ್ತು ಆರೋಪಿಗೂ ಇರುವ ಹಗೆತನವೇನೆಂಬುದನ್ನು ಎದುರುದಾರರ ಪಕ್ಷದವರು ವಿವರಿಸಿಲ್ಲ. ಪಂಚರ ಸಮಕ್ಷಮದಲ್ಲಿ ತೆಗೆಯಲಾದ ಮಾದರಿಯಲ್ಲಿ ರಾಸಾಯನಿಕ ವರದಿಯನ್ವಯ ಮದ್ಯಸಾರದ ಅಂಶವು ಪತ್ತೆಯಾಗಿರುವುದರಿಂದ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದಲ್ಲಿ ಮದ್ಯವು ಸಾಗಿಸಲಾಗುತ್ತಿತ್ತೆನ್ನುವುದು ಸುಳ್ಳೆನ್ನುವುದು ಸರಿಯಲ್ಲ. ಈ ಎಲ್ಲಾ ಕಾರಣಗಳಿಂದಾಗಿ ಅಭಿಯೋಜನೆ ಪಕ್ಷದವರು ಈ ಘಟನೆ ಸಂಭವಿಸಿರುವುದನ್ನು ನಿಸ್ಸಂಶಯವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದು ಸ್ಪಷ್ಟವಾಗಿರುತ್ತದೆ.

13. ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದ ಮಾಲೀಕರಾದ ಗಜಾ ತಂದೆ ಚುಡಾಮಣಿ ಬಾನಾವಳಿಕರ ಇವರು ದಿನಾಂಕ: 8.12.2004 ರಂತೆ ಈ ಪ್ರಾಧಿಕಾರದಲ್ಲಿ ಡಿ.ಡಬ್ಲ್ಯೂ-1 ರಂತೆ ಸಾಕ್ಷಿ ನುಡಿಯುತ್ತಾ, ಜಪ್ತಿಯಾದ ವಾಹನವು ತನ್ನ ಮಾಲೀಕತ್ವದ್ದಾಗಿದ್ದು, ಇದನ್ನು ಯಾವುದೇ ಗುನ್ನೆಯಲ್ಲಿ ಬಳಸಿರುವುದಿಲ್ಲವೆಂದೂ, ತನ್ನ ವಾಹನದ ಮೇಲೆ ದಾಖಲಿಸಿರುವ ಮೊಕದ್ದಮೆಯು ಸುಳ್ಳಾಗಿರುತ್ತದೆಂದೂ, ವಾಹನವನ್ನು ಸರಾಯಿ ಸಾಗಾಣಿಕೆಗೆ ಬಳಸಿರುವುದಿಲ್ಲವೆಂದೂ, ಪೊಲೀಸರು ತಾನು ಸ್ಕೂಟರ್ ಮೇಲೆ ಹೋಗುತ್ತಿರುವಾಗ ಬಲಾತ್ಕಾರವಾಗಿ ಪ್ರಕರಣ ದಾಖಲಿಸಿರುತ್ತಾರೆಂದೂ, ಈ ಪ್ರಕರಣಕ್ಕೂ ತನ್ನ ವಾಹನಕ್ಕೂ ಯಾವುದೇ ಸಂಬಂಧವಿಲ್ಲವೆಂದೂ ನುಡಿದಿರುತ್ತಾರೆ. ನಂತರ ಮಾನ್ಯ ಎ.ಡಿ.ಪಿ. ಯವರ ಪಾಟೀ ಸವಾಲಿನಲ್ಲಿ, ತಾನು ಅಬಕಾರಿ ಮಾಲನ್ನು ಸಾಗಾಟ ಮಾಡಿದ ಬಗ್ಗೆ ತನ್ನ ವಿರುದ್ಧ ಪೊಲೀಸರು ಆಪಾದನಾ ಪಟ್ಟಿ ಸಲ್ಲಿಸಿರುವುದನ್ನು ಒಪ್ಪಿಕೊಂಡಿರುತ್ತಾರೆ. ಕಾರವಾರ ಪೊಲೀಸರಿಗೂ ತನಗೂ ಯಾವುದೇ ರೀತಿಯ ದ್ವೇಷ ಇಲ್ಲವೆನ್ನುವುದನ್ನು ಸಹ ಒಪ್ಪಿಕೊಂಡಿರುತ್ತಾರೆ. ತನ್ನ ಮೇಲೆ ಕೇಸು ಹಾಕುವಂತಹ ಅಗತ್ಯತೆ ಸಹ ಅವರಿಗಿರುವುದಿಲ್ಲವೆಂಬುದನ್ನು ಸಹ ಒಪ್ಪಿಕೊಂಡಿರುತ್ತಾರೆ. ನಂತರ ತನ್ನ ಪರ ವಕೀಲರ ಮರು ವಿಚಾರಣೆಯಲ್ಲಿ ತಾನು ಈ ಪ್ರಕರಣದಲ್ಲಿ ನಿರ್ದೋಷಿಯಾಗಿರುವುದಾಗಿ ತಿಳಿಸಿದ್ದು, ಮಾನ್ಯ ಎ.ಡಿ.ಪಿ.ಯವರ ಪಾಟೀ ಸವಾಲಿನಲ್ಲಿ ನ್ಯಾಯಾಲಯದ ತೀರ್ಪಿನ ನಕಲನ್ನು ಈ ಪ್ರಾಧಿಕಾರದಲ್ಲಿ ಹಾಜರುಪಡಿಸಿಲ್ಲವೆಂಬುದನ್ನು ಒಪ್ಪಿಕೊಂಡಿರುತ್ತಾರೆ.

14. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:- ಈ ಪ್ರಕರಣದ ಆರೋಪಿಯೇ ವಾಹನದ ಮಾಲೀಕನಾಗಿದ್ದು, ಈ ಆರೋಪಿಯ ಮೇಲೆ ಕಳೆದ ಎರಡು ವರ್ಷಗಳಲ್ಲಿ ಈ ಕೆಳಗಿನಂತೆ ಅಬಕಾರಿ ಪ್ರಕರಣಗಳು ದಾಖಲಾಗಿದ್ದು, ಆತನು ಹವ್ಯಾಸಿ ಆರೋಪಿತನೆನ್ನುವುದು ಆತನ ವಿರುದ್ಧ ಕಳೆದೊಂದು ವರ್ಷದಲ್ಲಿ ದಾಖಲಾಗಿರುವ ಈ ಕೆಳಗಿನ ಪ್ರಕರಣಗಳಿಂದ ಕಂಡುಬರುತ್ತದೆ.

1. ಕಾರವಾರ ಶಹರ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 80/2004, ದಿನಾಂಕ: 15.06.2004
2. ಕಾರವಾರ ಶಹರ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 118/2004, ದಿನಾಂಕ: 23.08.2004

ಈ ಮೇಲಿನ ಕಾರಣಗಳಿಂದಾಗಿ ಹಾಗೂ ಆರೋಪಿಯು ಕ್ರಿಮಿನಲ್ ನ್ಯಾಯಾಲಯದಲ್ಲಿ ನಿರ್ದೋಷಿಯಾಗಿದ್ದರೂ, ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣಿಸಲು ಬರುವುದಿಲ್ಲವಾದ ಕಾರಣ, ಈ ಪ್ರಕರಣದಲ್ಲಿ ಜಪ್ತಿಯಾದ ವಾಹನ ಯಾರ ವಶದಲ್ಲಿತ್ತೋ ಅವರ ಗಮನಕ್ಕೆ ಬಾರದೇ ಮತ್ತು ಅವರು ಶಾಮೀಲಾಗದೇ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬುದನ್ನು ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಲು ವಿಫಲರಾಗಿರುವುದು ಕಂಡುಬರುತ್ತದೆ.

15. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಫೆನ್ನಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ:62/2001 ದಿನಾಂಕ: 15.7.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ: 183/2001 ದಿನಾಂಕ: 21.07.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ: 121/2001, ದಿನಾಂಕ: 26.11.2004 ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ.

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 ಎ(3)ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಹರ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 107/2001 ದಿನಾಂಕ: 16.05.2001 ರಲ್ಲಿ ಜಪ್ತಿಯಾದಂತಹ ಒಂದು ಸ್ಕೂಟರ್ ಸಂಖ್ಯೆ: ಕೆಎ-30/ ಎಚ್-6576 ನೇದನ್ನು ಹಾಗೂ ಮಿನಿಕೊಲಾಸ್ ಪೋರ್ಟ್‌ವೈನ್ 750 ಮಿ.ಲೀ.ನ 10 ಸೀಸೆಗಳು, ಇಂಪೀರಿಯಲ್ ಬ್ಲೂ ವಿಸ್ಕಿ 750 ಮಿ.ಲೀ.ನ 5 ಸೀಸೆಗಳು ಮತ್ತು ಗೋಲ್ಡ್ ಕಾಯ್ನ್ ಡಾ: ಬ್ರ್ಯಾಂಡಿ 180 ಮಿ.ಲೀ.ನ 48 ಸೀಸೆಗಳನ್ನು (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಸೀಸೆಗಳನ್ನು ಹೊರತುಪಡಿಸಿ) ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/34/ 2001-02, ದಿನಾಂಕ: 2.08.2001 ನೇದರಂತೆ ಈ ಪ್ರಕರಣದಲ್ಲಿ ಜಪ್ತಿಯಾದ ಸ್ಕೂಟರ್‌ನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿರುವ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಮುಟ್ಟುಗೋಲು ಹಾಕಿದ ಮದ್ಯದ ಪೈಕಿ ಅ.ನಂ. 2ನೇಯದು ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಅನುಮೋದನೆ ಪಡೆದಿರುವುದರಿಂದ ಅವುಗಳನ್ನು ಕೆ.ಎಸ್.ಬಿ.ಸಿ.ಎಲ್. ಉಗ್ರಾಣ, ಸಿರ್ಸಿಗೆ ಹಸ್ತಾಂತರಿಸಲು ಆದೇಶಿಸಿದೆ ಹಾಗೂ ಉಳಿದ ಮದ್ಯವು ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಅನುಮೋದನೆ ಪಡೆಯದ ಕಾರಣ ಅವುಗಳನ್ನು ಅಬಕಾರಿ ಉಪ ಅಧೀಕ್ಷಕರು, ಗುಪ್ತ ವಾರ್ತಾ ವಿಭಾಗ, ಕಾರವಾರ ರವರ ಸಮಕ್ಷಮ ನಾಶಪಡಿಸಿ, ಖಾಲಿ ಸೀಸೆಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಅಬಕಾರಿ ನಿರೀಕ್ಷಕರು, ಕಾರವಾರ ವಲಯ ಇವರಿಗೆ ಆದೇಶಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಡಿಸೆಂಬರ್ ತಿಂಗಳ 21ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ ತಿದ್ದಿದ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು).

**ಎ. ಎಸ್. ವಿಶ್ವರೂಪ**
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ. 1 :- ರತ್ನಾಕರ ಜಯರಾಮ ನಾಯ್ಕ
ಪ್ರಾ.ಸಾ.ನಂ. 2 :- ಅಂತೋನಿ ಜಾನ್ ಜೆ.ಕೆ., ಸಿ.ಪಿ.ಐ.

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಡಿ.ಡಬ್ಲ್ಯೂ 1 :- ಗಜಾ ತಂದೆ ಚುಡಾಮಣಿ ಬಾನಾವಳಿಕರ

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ1 :- ಪಂಚನಾಮೆ
ನಿಶಾನೆ ಪಿ1ಎ :- ಫಿರ್ಯಾದಿಯ ಸಹಿ
ನಿಶಾನೆ ಪಿ2 :- ಪ್ರ.ಮಾ. ವರದಿ

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

-ಇಲ್ಲಾ-

**ಎ. ಎಸ್. ವಿಶ್ವರೂಪ**
ಪಿ.ಆರ್.94 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ: 209:ಡಿಟಿಸಿಆರ್:2001-02 ದಿನಾಂಕ: 17ನೇ ಡಿಸೆಂಬರ್ 2004**

**ಉಪಸ್ಥಿತರು :** ಎನ್. ಎಂ. ಹುಸೇನ್ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ. ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು :** **ವಿರುದ್ಧ** **ಆರೋಪಿಗಳು:**

ಪೊಲೀಸ್ ಉಪ ನಿರೀಕ್ಷಕರು,
ಉಪ್ಪಿನಂಗಡಿ ಪೊಲೀಸ್ ಠಾಣೆ, ಉಪ್ಪಿನಂಗಡಿ

ಪರಾರಿಯಾಗಿರುತ್ತಾರೆ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 21.10.2001 ರಂದು ಪೊಲೀಸು ಉಪ ನಿರೀಕ್ಷಕರು ಉಪ್ಪಿನಂಗಡಿ ಪೊಲೀಸು ಠಾಣೆರವರು ತಮ್ಮ ಸಿಬ್ಬಂದಿಯವರೊಂದಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ರಾತ್ರಿ ಸುಮಾರು 12.45 ಗಂಟೆ ಸಮಯದಲ್ಲಿ ಪುತ್ತೂರು ತಾಲೂಕು ಬಜತ್ತೂರು ಗ್ರಾಮದ ಕರ್ಮಾರ್ ಎಂಬಲ್ಲಿ ಶ್ರೀ ಕೈಲಾರ ಮಹಾಲಿಂಗ ಭಟ್ ಎಂಬುವರ ತೋಟದ ಬಳಿ ಇರುವ ಕಟ್ಟಡದ ಬಳಿ ದಾಳಿ ನಡೆಸಿದಾಗ ಮಹಾಲಿಂಗ ಭಟ್ ಮತ್ತು ಮೂರು ಜನ ಸಹಾಯಕರು ಪೊಲೀಸರನ್ನು ಕಂಡು ಓಡಿದರು. ಪೊಲೀಸರು ಅವರನ್ನು ಬೆನ್ನಟ್ಟಿದರೂ ಫಲಕಾರಿಯಾಗಿರುವುದಿಲ್ಲ. ನಂತರ ಸದರಿ ಕಟ್ಟಡದ ಬಾಗಿಲು ತೆರೆದುಕೊಂಡು ಅದರ ಒಳಗಡೆ ವಿದ್ಯುತ್ ಲೈಟ್‌ಗಳು ಉರಿಯುತ್ತಿದ್ದು, ಕಟ್ಟಡದ ಎದುರಿನ ಬಾಗಿಲಿನಿಂದಾಗಿ ಒಳಪ್ರವೇಶಿಸಿದಾಗ ಎದುರು ಕೋಣೆಯಲ್ಲಿ ಒಂದು ಸೋಫಾ ಹಾಗೂ ಟೇಬಲನ್ನು ಇಟ್ಟಿರುತ್ತದೆ. ಅದರ ಎಡಗಡೆ ಒಂದು ಕೋಣೆಯಿದ್ದು, ಸೋಫಾ ಇಟ್ಟಿರುವ ಕೋಣೆಯಿಂದ ದಕ್ಷಿಣಕ್ಕೆ ಒಂದು ಬಾಗಿಲು ಇದ್ದು ಅದರಲ್ಲಿ ಒಂದು ಹಳೆಯ ಫ್ರಿಜ್ ಇದೆ. ಸದರಿ ಕೋಣೆಯ ಪೂರ್ವಕ್ಕೆ ಒಂದು ಕೋಣೆ ಖಾಲಿಯಿರುತ್ತದೆ. ಈ ನಾಲ್ಕು ಕೋಣೆಗಳು ಆರ್.ಸಿ.ಸಿ ಯಿಂದ ಮಾಡಿರುತ್ತದೆ. ಫ್ರಿಜ್ ಇರುವ ಕೋಣೆಯ ಪಶ್ಚಿಮ ಗೋಡೆಯಲ್ಲಿ ಒಂದು ಬಾಗಿಲು ಇದ್ದು, ಅದರ ಪಶ್ಚಿಮಕ್ಕೆ ಒಂದು ಕೋಣೆಯಿರುತ್ತದೆ. ಆ ಕೋಣೆಯಿಂದ ಹೊರಗೆ ಬರಲು ಉತ್ತರದ ಬದಿ ಕೋಣೆಯಲ್ಲಿ ಬಾಗಿಲು ಇರುತ್ತದೆ. ಸದರಿ ಕೋಣೆಯ ದಕ್ಷಿಣದಲ್ಲಿ ಒಂದು ಕೋಣೆಯಿದ್ದು, ಅದರ ಪಶ್ಚಿಮ ಮೂಲೆಯಲ್ಲಿ ಎರಡು ಸಿಂಟೆಕ್ಸ್ ಪ್ಲಾಸ್ಟಿಕ್ ಡ್ರಮ್‌ಗಳನ್ನು ಇಟ್ಟಿದ್ದು, ಅವುಗಳಲ್ಲಿ 300 ಲೀಟರ್ ಸಾಮರ್ಥ್ಯದ ಮತ್ತು ಇನ್ನೊಂದು 200 ಲೀಟರ್ ಸಾಮರ್ಥ್ಯದ ಡ್ರಮ್‌ಗಳಿರುತ್ತದೆ. ಆ ಪೈಕಿ 300 ಲೀಟರ್ ಡ್ರಮ್‌ಗೆ ಒಂದು ವಿದ್ಯುತ್ ಮೋಟಾರು ಪಂಪ್‌ನ್ನು ಅಳವಡಿಸಿರುತ್ತದೆ. ಹಾಗೂ 200 ಲೀಟರ್ ಪ್ಲಾಸ್ಟಿಕ್ ಡ್ರಮ್‌ಗೂ ಸಹ ವಿದ್ಯುತ್ ಪಂಪ್‌ನ್ನು ಸಹ ಅಳವಡಿಸಿರುತ್ತದೆ. ಸದರಿ ಡ್ರಮ್‌ಗಳಲ್ಲಿ ಸಾರಾಯಿ ತಯಾರಿಸುವ ದ್ರಾವಣದ ವಾಸನೆ ಬರುತ್ತದೆ. ಸದರಿ ಪಂಪ್‌ಗಳಿಗೆ ಪೈಪನ್ನು ಅಳವಡಿಸಿದ್ದು, ಸದರಿ ಕೋಣೆಯಿಂದ ಇನ್ನೊಂದು ಕೋಣೆಯಿದ್ದು ಅದರಲ್ಲಿ ಸಹ ಒಂದು ಸಿಂಟೆಕ್ಸ್ ಡ್ರಮ್ ಇದ್ದು ಅದಕ್ಕೂ ಪೈಪನ್ನು ಜೋಡಿಸಿರುವುದು ಕಂಡು ಬರುತ್ತದೆ. ಸದರಿ ಡ್ರಮ್‌ನಲ್ಲಿಯೂ ಸಹ ಸಾರಾಯಿ ವಾಸನೆ ಬರುತ್ತದೆ. ಸದರಿ ಕೋಣೆಯ ಪೂರ್ವ ಬದಿಯಲ್ಲಿ 35 ಲೀಟರ್‌ನ 15 ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ತಲಾ 25 ಲೀಟರ್‌ನಂತೆ ಮದ್ಯಸಾರ ತುಂಬಿಸಿಟ್ಟಿರುವುದು ಪತ್ತೆಯಾಗಿರುತ್ತದೆ. ಹಾಗೂ 35 ಲೀಟರ್‌ನ 20 ಖಾಲಿ ಪ್ಲಾಸ್ಟಿಕ್ ಕ್ಯಾನ್‌ಗಳಿರುತ್ತದೆ. ಸದರಿ ಕೋಣೆಯ ದಕ್ಷಿಣಕ್ಕೆ ಇನ್ನೊಂದು ಕೋಣೆಯಲ್ಲಿ ಸಾರಾಯಿ ತೊಟ್ಟೆಗಳನ್ನು ತಯಾರಿಸುವ ಸ್ಯಾಚೆಟ್ ಯಂತ್ರವನ್ನು ಇಟ್ಟಿದ್ದು, ಸದರಿ ಯಂತ್ರಕ್ಕೆ ಸಿಂಟೆಕ್ಸ್ ಡ್ರಮ್‌ಗಳಿಂದ ಪೈಪ್ ಜೋಡಿಸಿರುವುದು ಕಂಡು ಬರುತ್ತದೆ. ಅಲ್ಲದೆ ಇದಕ್ಕೆ ವಿದ್ಯುತ್ ಸಂಪರ್ಕವನ್ನು ಜೋಡಣೆ ಮಾಡಿರುವುದು ಕಂಡು ಬರುತ್ತದೆ. ಹಾಗೂ ಪಕ್ಕದಲ್ಲಿಯೇ ಬಿಳಿ ಬಣ್ಣದ ಪಾಲಿಥಿನ್ ಗೋಣಿ ಚೀಲಗಳಲ್ಲಿ ಸಾರಾಯಿ ತೊಟ್ಟೆಗಳನ್ನು ತುಂಬಿಸಿರುವುದು ಪತ್ತೆಯಾಗಿದ್ದು, ಒಟ್ಟು 30 ಚೀಲಗಳಿದ್ದು ಪ್ರತಿಯೊಂದರಲ್ಲಿ 100 ಎಂ.ಎಲ್.ನ 500 ಸಾರಾಯಿ ತೊಟ್ಟೆಗಳಿರುತ್ತದೆ. ಹಾಗೂ ಸಾರಾಯಿ ತೊಟ್ಟೆ ಮಾಡಲು ಪ್ಲಾಸ್ಟಿಕ್ ರೋಲ್ ಎರಡು ಬಂಡಲ್‌ಗಳಿರುತ್ತದೆ. ಇವುಗಳಲ್ಲಿ ಒಂದರಲ್ಲಿ ಮೆ: ಮೈ ಶುಗರ್ ಕಂ., ಸಾರಾಯಿ ಸಂಸ್ಕರಣ ಘಟಕ, ಉಡುಪಿ ಹಾಗೂ ದಕ್ಷಿಣ ಕನ್ನಡ ಎಂದು ಬರೆದಿರುತ್ತದೆ. ಸದರಿ ಕೋಣೆಯ ಉತ್ತರಕ್ಕೆ ಒಂದು ಕೋಣೆಯಿದ್ದು, ಅದರ ಪೂರ್ವ ಬದಿ ಕೋಣೆಯಲ್ಲಿ ಕಿಟಿಕಿಗಳು ಹಾಗೂ ಬಾಗಿಲುಗಳಿದ್ದು, ಬಾಗಿಲಿನಿಂದ ಹೊರಗೆ ಬಂದಾಗ ಅಂಗಳದಲ್ಲಿ ಒಂದು ಟಾಟಾ ಸುಮೋ ವಾಹನವನ್ನು ನಿಲ್ಲಿಸಿದ್ದು, ಇದರಲ್ಲಿ 10 ಪಾಲಿಥಿನ್ ಚೀಲಗಳಲ್ಲಿ 100 ಎಂ.ಎಲ್.ನ 500 ಸಾರಾಯಿ ತೊಟ್ಟೆಗಳಿದ್ದು, ಒಟ್ಟು 5000 ಸಾರಾಯಿ ತೊಟ್ಟೆಗಳಿರುವುದು ಪತ್ತೆಯಾಗಿರುತ್ತದೆ. ಸಾರಾಯಿ ತುಂಬಿದ ತೊಟ್ಟೆಗಳಲ್ಲಿ 8 ಸಾರಾಯಿ ತೊಟ್ಟೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಬಿಳಿ ಬಟ್ಟೆಯಿಂದ ಹೊಲಿದು ಎಸ್.ಹೆಚ್.ಓ. ಸೀಲ್ ಮಾಡಿ ಪಂಚರ ಹಾಗೂ ತನಿಖಾಧಿಕಾರಿಯವರ ಸಹಿ ಇರುವ ಚೀಟಿಯನ್ನು ಅಂಟಿಸಿರುತ್ತಾರೆ. ಹಾಗೂ ಮದ್ಯಸಾರದಿಂದ ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಎಸ್.ಹೆಚ್.ಓ. ಸೀಲ್ ಮಾಡಿ ಪಂಚರ ಹಾಗೂ ತನಿಖಾಧಿಕಾರಿಯವರ ಸಹಿಯನ್ನು ಪಡೆದು ಚೀಟಿಯನ್ನು ಅಂಟಿಸಿರುತ್ತಾರೆ. ಇದು ಒಂದು ಅಕ್ರಮ ಸಾರಾಯಿ ತೊಟ್ಟೆಗಳನ್ನು ತಯಾರಿಸುವ ಘಟಕವಾಗಿರುವುದರಿಂದ ಈ ಕೆಳಗಿನ ಸೊತ್ತುಗಳನ್ನು ವಶಪಡಿಸಿಕೊಂಡಿರುತ್ತಾರೆ.

1. 35 ಲೀಟರ್ ಪ್ರಮಾಣದ ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಸ್ಪಿರಿಟ್ ತುಂಬಿದ ಕ್ಯಾನ್‌ಗಳು-15
2. 35 ಲೀಟರ್ ಸಾಮರ್ಥ್ಯದ ಖಾಲಿ ಕ್ಯಾನ್‌ಗಳು-20.
3. ಸಿಂಟೆಕ್ಸ್ ಡ್ರಮ್‌ಗಳು-3 (200 ಲೀಟರ್‌ನದ್ದು) ಹಾಗೂ ಅದಕ್ಕೆ ಜೋಡಿಸಿದ ಮೋಟಾರು ಪಂಪ್ ಹಾಗೂ ಪೈಪ್.
4. 300 ಲೀಟರ್‌ನ ಸಿಂಟೆಕ್ಸ್ ಪ್ಲಾಸ್ಟಿಕ್ ಡ್ರಮ್ ಹಾಗೂ ಅದಕ್ಕೆ ಅಳವಡಿಸಿದ ವಿದ್ಯುತ್ ಮೋಟಾರು
5. ಸಾರಾಯಿ ತೊಟ್ಟೆ ಮಾಡಲು ಉಪಯೋಗಿಸುವ ಪ್ಲಾಸ್ಟಿಕ್ ರೋಲ್‌ಗಳು-2
6. ತೊಟ್ಟೆ ತಯಾರಿಸಲು ಉಪಯೋಗಿಸುವ ಯಂತ್ರ-1
7. ತಲಾ 500 ರಂತೆ ತುಂಬಿದ 100 ಎಂ.ಎಲ್‌ನ ಸಾರಾಯಿ ತೊಟ್ಟೆಗಳಿರುವ ಬಿಳಿ ಪಾಲಿಥಿನ್ ಬ್ಯಾಗ್‌ಗಳು-40 (ಒಟ್ಟು 20,000 ಸಾರಾಯಿ ತೊಟ್ಟೆಗಳು).
8. ಟಾಟಾ ಸುಮೋ ವಾಹನ ಸಂಖ್ಯೆ: ಕೆಎ-21-ಎಂ-7779.

ಈ ಮೇಲಿನ ಸೊತ್ತುಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ವಶಪಡಿಸಿಕೊಂಡು ಆರೋಪಿಯ ವಿರುದ್ಧ ಮೊಕದ್ದಮೆ ಸಂಖ್ಯೆ: 160/2001 ದಿನಾಂಕ: 21.10.2001 ರಂದು ಮೊಕದ್ದಮೆ ದಾಖಲಿಸಿಕೊಂಡು ಮತ್ತು ಮಹಜರನ್ನು ಸ್ಥಳದಲ್ಲಿಯೇ ಬರೆದು ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಪ್ರಾಧಿಕಾರದ ಆದೇಶದ ಮೇರೆಗೆ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯರವರಿಗೆ ಹಸ್ತಾಂತರಿಸಿರುತ್ತಾರೆ.

ತನಿಖಾಧಿಕಾರಿಯಾದ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯರವರ ತನಿಖಾ ವರದಿ ಸಂಖ್ಯೆ ದಿನಾಂಕ: 08.01.2003ರ ಪತ್ರದಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ:209:ಡಿಟಿಸಿಆರ್:2001-02 ದಿನಾಂಕ: 16.01.2003 ರಂದು ಟಾಟಾ ಸುಮೋ ವಾಹನವನ್ನು ಹೊರತುಪಡಿಸಿ ಉಳಿದ ಸೊತ್ತುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಆದೇಶ ನೀಡಿರುತ್ತದೆ.

ವಾಹನದ ಆರ್.ಸಿ ಮಾಲೀಕರಾದ ಶ್ರೀ ಕೈಲಾರ್ ಮಹಾಲಿಂಗ ಭಟ್, ಬಿನ್ ದಿ. ಕೆ.ಪಿ.ಸುಬ್ರಾಯ ಭಟ್, ಕೈಲಾರ್ ಮನೆ, ಇಲಂತಿಲ್ ಗ್ರಾಮ, ಬೆಳ್ತಂಗಡಿ ತಾಲೂಕುರವರು ತಮ್ಮ ವಕೀಲರ ಮೂಲಕ ಈ ಪ್ರಾಧಿಕಾರಕ್ಕೆ ದಿನಾಂಕ: 5.06.2003 ರಂದು ಅರ್ಜಿಯನ್ನು ಸಲ್ಲಿಸಿ, ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಟಾಟಾ ಸುಮೋ ವಾಹನವನ್ನು ತನಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ. ತದನಂತರ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ನಂತರ ಈ ಪ್ರಾಧಿಕಾರದಿಂದ ದಿನಾಂಕ: 30.05.2003 ರಂದು ಕಾರಣ ಕೇಳಿ ನೋಟೀಸನ್ನು ನೀಡಲಾಗಿದ್ದು, ಕಾರಣ ಕೇಳಿ ನೋಟೀಸಿಗೆ ದಿನಾಂಕ: 17.07.2003 ರಂದು ಉತ್ತರವನ್ನು ನೀಡಿರುತ್ತಾರೆ. ಸದ್ರಿಯವರು ಸಲ್ಲಿಸಿರುವ ಉತ್ತರದಂತೆ, ವಾಹನವನ್ನು ಶ್ರೀ ಅಬುಬಕರ್ ಎಂಬುವವರಿಗೆ ದಿನಾಂಕ: 11.10.2001 ರಂದು ಮಾರಾಟ ಮಾಡಿರುವುದಾಗಿ ತಿಳಿಸಿರುತ್ತಾರೆ. ಆದರೆ

ಸದ್ರಿ ವಾಹನವನ್ನು ಅಪರಾಧ ಸ್ಥಳದಲ್ಲಿ ಅವರ ಸ್ವಂತ ಆಸ್ತಿ ವಠಾರದಲ್ಲಿ ಅಕ್ರಮ ಸಾರಾಯಿ ಸಾಗಾಣಿಕೆಗೆ ಸಿದ್ದಪಡಿಸಿ ಇರಿಸಲಾಗಿದ್ದು, ಅಪರಾಧ ಸಂದರ್ಭದಲ್ಲಿ ವಶಪಡಿಸಿಕೊಳ್ಳಲಾಗಿರುವುದರಿಂದ ಅವರ ಉತ್ತರದಲ್ಲಿ ಯಾವುದೇ ಸತ್ಯಾಂಶ ಕಂಡು ಬರುವುದಿಲ್ಲ. ಈ ಕಾರಣದಿಂದಾಗಿ ಅವರು ಈ ಪ್ರಾಧಿಕಾರದ ಕಾರಣ ಕೇಳಿ ನೋಟೀಸಿಗೆ ನೀಡಿರುವ ಉತ್ತರ ಅಂಗೀಕರಿಸಲು ಯಾವುದೇ ಸಾಕ್ಷಿದಾರ ಇಲ್ಲದಿರುವುದರಿಂದ, ಸದ್ರಿ ವಾಹನವನ್ನು ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಲಾಗಿರುವುದು ನಂಬಬಹುದಾಗಿರುವುದರಿಂದ ಅವರ ಅರ್ಜಿ ದಿನಾಂಕ: 5.6.2003 ನ್ನು ತಿರಸ್ಕರಿಸಬಹುದಾಗಿದೆ.

ತನಿಖಾಧಿಕಾರಿಯಾದ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯರವರ ತನಿಖಾ ವರದಿ ಸಂಖ್ಯೆ: 160/2001-02 ದಿನಾಂಕ: 2.10.2004 ರ ತಮ್ಮ ಪತ್ರದಲ್ಲಿ ವಶಪಡಿಸಿಕೊಂಡಿರುವ ಟಾಟಾ ಸುಮೋ ವಾಹನ ಸಂಖ್ಯೆ: ಕೆಎ-21-ಎಂ-7779 ನ್ನು ವಶಪಡಿಸಿಕೊಂಡು ಸುಮಾರು 3 ವರ್ಷ ಕಳೆದರೂ ಈ ಪ್ರಾಧಿಕಾರದ ಮುಂದೆ ಯಾವುದೇ ವ್ಯಕ್ತಿ ಹಾಜರಾಗಿರುವುದಿಲ್ಲ. ವಾಹನವನ್ನು ತೆರೆದ ಸ್ಥಳದಲ್ಲಿ ನಿಲ್ಲಿಸಿರುವುದರಿಂದ ಅದು ಪ್ರಕೃತಿಯ ವಿಕೋಪಕ್ಕೆ ವಾಹನದ ಬಹುಭಾಗವು ತುಕ್ಕುಹಿಡಿದು ನಶಿಸಿ ಹೋಗಿರುವುದರಿಂದ ಸರಕಾರಕ್ಕೆ ಆದಾಯದ ಹಿತದೃಷ್ಟಿಯಿಂದ ಸದರಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಆದೇಶ ನೀಡಬೇಕೆಂದು ಈ ಮೂಲಕ ಶಿಫಾರಸ್ಸು ಮಾಡಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲವಾದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43 (ಸಿ) ಅಡಿಯಲ್ಲಿ ಅಕ್ರಮ ಮದ್ಯಸಾರವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಸದರಿ ಪ್ರಕರಣವು ದಾಖಲಾಗಿ ಸುಮಾರು 3 ವರ್ಷ ಕಳೆದಿದ್ದರೂ ಜಪ್ತಿಪಡಿಸಿರುವ ವಾಹನ ತನ್ನದೆಂದು ಕೋರಿ ಅರ್ಜಿಯನ್ನು ಸಲ್ಲಿಸಿದರೂ, ವಾಹನ ಮಾಲೀಕರು ತಾನು ಸದ್ರಿ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸದಂತೆ, ಯಾವುದೇ ಜಾಗ್ರತೆ ವಹಿಸಿರುವ ಬಗ್ಗೆ ಸಾಕ್ಷ್ಯಾಧಾರ ನೀಡಲು ವಿಫಲರಾಗಿರುತ್ತಾರೆ.

ಅಲ್ಲದೇ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ತೊಟ್ಟೆಗಳನ್ನು ಸಾಗಾಣಿಕೆ ಮಾಡಿರುವುದು ಸ್ಪಷ್ಟವಾಗಿರುತ್ತದೆ. ಅಲ್ಲದೇ ದಿನಾಂಕ: 20.10.2001 ರಂದು ವಾಹನ ಸಂಖ್ಯೆ: ಕೆಎ-21 ಎಂ-7779 ರಲ್ಲಿ ಅಕ್ರಮವಾಗಿ ಸಾಗಣೆಯಾಗುತ್ತಿದ್ದ ಸರಾಯಿ ತೊಟ್ಟೆಗಳನ್ನು ಪತ್ತೆ ಹಚ್ಚಿ, ಸಾರಾಯಿ ತೊಟ್ಟೆಗಳನ್ನು ಮತ್ತು ವಾಹನವನ್ನು ಸ್ಥಳ ಮಹಜರಿನೊಂದಿಗೆ ಜಪ್ತಿ ಪಡಿಸಿ ಪೊಲೀಸು ಉಪ ನಿರೀಕ್ಷಕರು, ಉಪ್ಪಿನಂಗಡಿ ಪೊಲೀಸು ಠಾಣೆ ಇವರು ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಅಲ್ಲದೇ ರಾಸಾಯನಿಕ ತಜ್ಞರ ವರದಿಯಂತೆ ಜಪ್ತಿಪಡಿಸಿರುವ ವಸ್ತು ಸಾರಾಯಿ ಎಂದು ದೃಢೀಕರಿಸಲ್ಪಟ್ಟಿರುತ್ತದೆ. ಈ ಮೇಲಿನ ವಿದ್ಯಮಾನಗಳಿಂದ ಮತ್ತು ಈ ಪ್ರಾಧಿಕಾರದ ಮುಂದೆ ಲಭ್ಯವಿರುವ ದಾಖಲೆ ಹಾಗೂ ಸಾಕ್ಷ್ಯಾಧಾರಗಳಿಂದ ಜಪ್ತಿಗೊಳಿಸಿರುವ ವಾಹನದಲ್ಲಿ ಅಕ್ರಮ ಸಾರಾಯಿ ತೊಟ್ಟೆಗಳ ಸಾಗಾಣಿಕೆಯಾಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ.

ತನಿಖಾಧಿಕಾರಿಯವರ ವರದಿಯಲ್ಲಿ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿದ ವಾಹನ ಮಾಲೀಕರಾದ ಶ್ರೀ ಕೈಲಾರ್ ಮಹಾಲಿಂಗ ಭಟ್ ರವರ ತೋಟದಲ್ಲಿಯೇ ಕಟ್ಟಡವೊಂದರಲ್ಲಿ ಅಕ್ರಮವಾಗಿ ಸಾರಾಯಿ ತೊಟ್ಟೆಗಳನ್ನು ತಯಾರಿಸಿ ಸಾಗಾಣಿಕೆ ಮಾಡುತ್ತಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಿಂದಲೇ ನಡೆದಿದೆ ಎಂದು ಭಾವಿಸಬಹುದಾಗಿದೆ. ಹಾಗೂ ಜಪ್ತುಪಡಿಸಿರುವ ವಾಹನವನ್ನು ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಮಳೆ ಬಿಸಿಲು, ಮುಂತಾದ ಹವಾಮಾನದ ವೈಪರೀತ್ಯದಿಂದ ಹಾಳಾಗುವ ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನ ಟಾಟಾ ಸುಮೋ ಸಂಖ್ಯೆ: ಕೆಎ-21-ಎಂ-7779 ನ್ನು ಕರ್ನಾಟಕ ಅಬಕಾರಿ ಕಾಯ್ದೆ 43(ಸಿ) ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಾಣಬರುವುದರಿಂದ ಅರ್ಜಿದಾರರು ಸಲ್ಲಿಸಿದ ಅರ್ಜಿಯಲ್ಲಿ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಸಲ್ಲಿಸಿದ ಅರ್ಜಿ ದಿನಾಂಕ: 05.06.2003ನ್ನು ತಿರಸ್ಕರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಎನ್. ಎಂ. ಹುಸೇನ್ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ)ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಪೊಲೀಸ್ ಉಪ ನಿರೀಕ್ಷಕರು, ಉಪ್ಪಿನಂಗಡಿ ಪೊಲೀಸ್ ಠಾಣೆ ಇವರ ಮೊಕದ್ದಮೆ ಸಂಖ್ಯೆ: 160/2001 ದಿನಾಂಕ: 21.10.2001 ರಲ್ಲಿ ವಶಪಡಿಸಿಕೊಂಡಿರುವ ವಾಹನ ಟಾಟಾ ಸುಮೋ ಸಂ: ಕೆಎ-21-ಎಂ-7779ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 17.12.2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.95

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಜಿಲ್ಲೆ, ಉಪವಿಭಾಗ, ಬೆಂದೂರ್‌ವೆಲ್‌ವೃತ್ತ, ಮಂಗಳೂರು-2 ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಡಬ್ಲ್ಯೂಸಿಎ:ಸಿಆರ್:1/2004:ಎಫ್ ದಿನಾಂಕ: 3ನೇ ಜನವರಿ 2005**

| **ಅರ್ಜಿದಾರರು :** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಶ್ರೀಮತಿ, ಅಮೀನ ಕೋಂ. ದಿ ಎಸ್. ಮಹಮ್ಮದ್ | | ಸೀನಿಯರ್ ಡಿವಿಜನಲ್ ಫೈನಾನ್ಸ್ ಮ್ಯಾನೇಜರ್, ಸದರ್ನ್ ರೈಲ್ವೇಸ್ |
| 1115:13 ಡಾಮ್ ರೋಡ್, ಪಾಲ್‌ಗಾಟ್ ಜಿಲ್ಲೆ. | | ಪಾಲ್‌ಗಾಟ್ ಜಿಲ್ಲೆ, ಕೇರಳ ರಾಜ್ಯ. |

**ಅಧಿಸೂಚನೆ:**

ಅರ್ಜಿದಾರಳಾದ ಶ್ರೀಮತಿ: ಅಮೀನ ಇವರು ತಮ್ಮ ಗಂಡನಾದ ಎಸ್. ಮಹಮ್ಮದ್ ಇವರು ಪ್ರತಿವಾದಿಗಳಾದ ಶ್ರೀ ಸದರ್ನ್ ರೈಲ್ವೇ ಪಾಲ್ಘಟ್ ಕೇರಳ ರಾಜ್ಯ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 12.09.03 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್. ಸಿ. ರಾಮಚಂದ್ರ**

ಪಿ.ಆರ್.96 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ.ಜಿಲ್ಲೆ, ಮಂಗಳೂರು.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೇಮಕಾತಿ ಆದೇಶ

## ಜಿಲ್ಲಾ ನೋಂದಣಾಧಿಕಾರಿಗಳು ಶಿವಮೊಗ್ಗ ಇವರ ನಡವಳಿಕೆಗಳು

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಶಿವಮೊಗ್ಗ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :**

1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಜಿನೋಶಿ: ಸಿಬ್ಬಂದಿ: 143: 2001-2002 ದಿನಾಂಕ: 19.12.2001.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್: 13: ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: EST-1-273/2001-2002 ದಿನಾಂಕ: 1.8.2002 (ದಿನಾಂಕ: 8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಂತಿಮ ಆಯ್ಕೆಪಟ್ಟಿ ಸಂಖ್ಯೆ:EST-1-273/2001-2002 ದಿನಾಂಕ: 23.11.2004.
5. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-273/2001-2002 ದಿನಾಂಕ: 14.12.2004.

**ಪ್ರಸ್ತಾವನೆ:**

ಈ ಇಲಾಖೆಯ ಶಿವಮೊಗ್ಗ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1. | ಶಿವಮೊಗ್ಗ ಜಿಲ್ಲೆ | ಒಂದು | ಒಂದು | ಎರಡು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು ಮೆರಿಟ್ ಆಧಾರದ ಮೇಲೆ ಆಯ್ಕೆ ಮಾಡಿ, ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಅಭ್ಯರ್ಥಿಗಳನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್‌ಮಾಡಿ ಸದರಿ ಅಭ್ಯರ್ಥಿಗಳನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆಗೆ ಕೆಳಕಂಡ ಅಭ್ಯರ್ಥಿಗಳನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

## ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (5)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡುಬಂದ ಕೆಳಕಂಡ ಅಭ್ಯರ್ಥಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ, ರೂ. 3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ | ಅಭ್ಯರ್ಥಿಯ ಹೆಸರು | ಎಸ್‌ಸಿ: ಎಸ್‌ಟಿ | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 1. | ಶರಣಪ್ಪ ಬಿನ್ ಮಾನಪ್ಪ ಸಾ: ಮಾರಲದಿನ್ನಿ ತಾಂಡಾ-584122 ತಾ: ಲಿಂಗಸಗೂರು ಜಿ: ರಾಯಚೂರು. | ಎಸ್‌ಸಿ | 1.4.1971 | 31.05.06 | ಎಸ್.ಎಸ್. ಎಲ್.ಸಿ. 72.333 | ಉಪನೋಂದಣಿ ಕಛೇರಿ ಶಿವಮೊಗ್ಗ ಶಿವಮೊಗ್ಗ ಜಿಲ್ಲೆ | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ ಮುಖ್ಯಪಟ್ಟಿ. |
| 2. | ಪ್ರೇಮಾ ಡಿ. ಕಾಡಜ್ಜಿ ಕೋಂ. ಎನ್.ಆರ್. ಮಂಜುನಾಥ ಸ್ವಾಮಿ C/o ಡಿ.ಬಿ. ಕಾಡಜ್ಜಿ ನಂ. 854/26, ಶಿವಕುಮಾರ ಸ್ವಾಮಿನಗರ 1ನೇ ಹಂತ, ದಾವಣಗೆರೆ. | ಎಸ್‌ಟಿ | 22.7.1972 | 30.01.15 | ಎಸ್.ಎಸ್. ಎಲ್.ಸಿ. 72.333 | ಉಪನೋಂದಣಿ ಕಛೇರಿ ಭದ್ರಾವತಿ ಶಿವಮೊಗ್ಗ ಜಿಲ್ಲೆ | ಪರಿಶಿಷ್ಟ ಪಂಗಡ ಮಹಿಳಾ ಅಭ್ಯರ್ಥಿ ಮುಖ್ಯಪಟ್ಟಿ. |

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ದರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಖೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್‌ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕದ ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99 ಶ್ರೀ ಬಿ. ಎಲ್. ನಾರಾಯಣ V/s ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ದರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ದಳಾಗಿರುತ್ತೇನೆ ಎಂಬ ಬಗ್ಗೆ 20/- ರೂಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು

ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂKCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/ ರೂಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.

17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ಪಿ.ಆರ್.97 ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ),**
**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1 ಅಲಿ ಆಸ್ಕರ್ ರಸ್ತೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ**
**ದಾವಾ ಅರ್ಜಿ ಸಂಖ್ಯೆ:ಅನಿ(ಕೈ ಮತ್ತು ಇ) ಡಿಐಎಸ್: ಡಿ7:4244: 2004-2005**

**ಉಪಸ್ಥಿತರು:** ಶ್ರೀ ಬಿ. ನಾಗರಾಜ, ಬಿ.ಎಸ್.ಸಿ., ಎಲ್ಎಲ್‌ಬಿ.,
ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

**ವಾದಿ :** **ವಿರುದ್ಧ** **ಪ್ರತಿವಾದಿಗಳು:**

ಕಾರ್ಯದರ್ಶಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್
ನಿಯಮಿತ, ನಂ. 11, ಬುಲ್ ಟೆಂಪಲ್ ರಸ್ತೆ,
ಬಸವನಗುಡಿ, ಬೆಂಗಳೂರು-560004

1. ಶ್ರೀ ಮಂಜುನಾಥ ವಾಸುದೇವ ಪಿಂಚಕಾನ, ವಯಸ್ಸು-25,
ಉದ್ಯೋಗ-ವ್ಯಾಪಾರ, ನಂ. 44, ಮನೆ ನಂ. 44 ಸಿಲ್ವರ್ ಟೌನ್,
ಗೋಕುಲ ರಸ್ತೆ, ಹುಬ್ಬಳ್ಳಿ-30.
2. ಶ್ರೀ ವಾಸುದೇವ ಚಂಡುರಾಯ ಪಿಂಚಕಾನ, ವಯಸ್ಸು-51,
ಉದ್ಯೋಗ-ಸರಾಫ್‌ರುವ ಚಿನ್ನಾಭರಣಗಳ ಪರೀಕ್ಷಕರು, ಮೌಲ್ಯಮಾಪಕರು,
ಮನೆ ನಂ. 44, ಸಿಲ್ವರ್ ಟೌನ್, ಗೋಕುಲ ರಸ್ತೆ, ಹುಬ್ಬಳ್ಳಿ-30.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು:**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ. 2,17,188-00 ಗಳನ್ನು ದಿನಾಂಕ: 1.7.2004 ರಿಂದ ಶೇಕಡ 16+2 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ: ಅನಿ (ಕೈ ಮತ್ತು ಇ) ಡಿಐಎಸ್/ಡಿ7/4244/2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2) ಒಂದನೇ ಪ್ರತಿವಾದಿಯು ಬ್ಯಾಂಕಿನ ಸದಸ್ಯನಾಗಿರುತ್ತಾರೆ. ಎರಡನೇ ಪ್ರತಿವಾದಿಯು ವಾದಿ ಬ್ಯಾಂಕಿನ ಹುಬ್ಬಳ್ಳಿ ಶಾಖೆಯ ಬಂಗಾರ ಆಭರಣಗಳ ಪರಿವೀಕ್ಷಕರಾಗಿದ್ದು, ಒಂದನೇ ಪ್ರತಿವಾದಿಯು ಆಭರಣಗಳ ಈಡಿನ ಮೇಲೆ ಸಾಲವನ್ನು ಮಂಜೂರು ಮಾಡಲು ಕೋರಿದ್ದು, ಸದರಿ ಆಭರಣಗಳನ್ನು ಎರಡನೇ ಪ್ರತಿವಾದಿಯು ಪರಿವೀಕ್ಷಿಸಿ ಬಂಗಾರದ ಆಭರಣಗಳು ನೈಜವೆಂದು ದೃಢೀಕರಿಸಿದ ನಂತರ ಸಾಲವನ್ನು ಬಿಡುಗಡೆ ಮಾಡಲಾಗಿರುತ್ತದೆ. ಆದರೆ ಸದರಿ ಬಂಗಾರದ ಆಭರಣಗಳು ನಕಲಿ ಆಭರಣಗಳಾಗಿರುತ್ತವೆ. ಒಂದನೇ ಪ್ರತಿವಾದಿಯವರು ಎರಡನೇ ಪ್ರತಿವಾದಿಯವರ ಮಗನಾಗಿರುತ್ತಾರೆ.

3) ವಾದಿಯು ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 2ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯಲ್ಲಿ 1ನೇ ಪ್ರತಿವಾದಿಯವರು 1/3 ಭಾಗ ಹಿಸ್ಸೆ, ಹೊಂದಿರುವುದಾಗಿ ತಿಳಿಸಿ, ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 2ನೇ ಪ್ರತಿವಾದಿ ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಏಕಮಾತ್ರ ಸ್ವತ್ತನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು/ಪರಬಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೆ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ ಡಿಕ್ರಿ ನೀಡಿದರೂ ಸದರಿ ಅವಾರ್ಡ್/ ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

4) ವಾದಿಯು ಸಲ್ಲಿಸಿರುವ ದಾವಾ ಅರ್ಜಿ ಮತ್ತು ಕಲಂ 103ರ ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೆ 1ನೇ ಮತ್ತು 2ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ: ಪರಭಾರೆ ಮಾಡದಂತೆ/ ತಡೆಯದೆ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

5) ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ: 2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಆದ ನಾನು 2ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.2,20,000-00 (ಎರಡು ಲಕ್ಷ ಇಪ್ಪತ್ತು ಸಾವಿರ ರೂಪಾಯಿಗಳು) ಗಳನ್ನು ವಾದಿ ಬ್ಯಾಂಕಿನ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 17.1.2005ರ ಒಳಗಾಗಿ ಅಧಿಕೃತ ಚಲನ್/ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

2ನೇ ಪ್ರತಿವಾದಿ ಶ್ರೀ ವಾಸುದೇವ ಚಂಡುರಾಯ ಪಿಂಚಕಾನ ಇವರ ಹೆಸರಿನಲ್ಲಿರುವ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯಲ್ಲಿ ಸದರಿಯವರ ಮಗನಾದ 1ನೇ ಪ್ರತಿವಾದಿ ಶ್ರೀ ಮಂಜುನಾಥ ವಾಸುದೇವ ಪಿಂಚಕಾನ ಇವರ 1/3 ಭಾಗ ಹಿಸ್ಸೆ.

| ಕ್ರಮ ಗೂ.ಆ | ಸರ್ವೆ ನಂ. | ಕ್ಷೇತ್ರ | ಆಸ್ತಿಯ ವರ್ಣನೆ | ಸ್ಥಳ | ಕಂದಾಯ | ಮಾಲೀಕನ ಹೆಸರು |
|---|---|---|---|---|---|---|
| 1 | 43/2 | 11 ಎಕರೆ 14 ಗುಂಟೆ | ಮಸಾರಿ | ಕಾಳಂಗಿ | 41.53 | ನಾಗೇಶ ಚಂದೂರಾಯ ಶೇಟ್, ಮೋಹನ ಚಂದೂರಾಯಶೇಟ್ ವಾಸುದೇವ ಚಂದೂರಾಯ ಶೇಟ್ ಇದರಲ್ಲಿ ನಾಗೇಶ್ ಇವರ ಹಿಸ್ಸೆ ಬಿಟ್ಟು ಉಳಿದದ್ದು. |

ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕು ಕಾಳಂಗಿ ಗ್ರಾಮ ಸರ್ವೆ ನಂಬರ್ 43/2, ಇದರ ವಿಸ್ತೀರ್ಣ 11 ಎಕರೆ 14 ಗುಂಟೆ ಷೆಡ್ಯೂಲ್ ಸ್ಥಿರಾಸ್ತಿಗೆ ಈ ಕೆಳಕಂಡ ಚಕ್ಕುಬಂದಿ.

(ಅವಿಭಾಜಿತ ಪಾಲು)

ಪೂರ್ವಕ್ಕೆ : 53ನೇ ಸರ್ವೆ ನಂಬರ್ ಜಮೀನು

ಪಶ್ಚಿಮಕ್ಕೆ : 42ನೇ ಸರ್ವೆ ನಂಬರ್ ಜಮೀನು

ಉತ್ತರಕ್ಕೆ : 44 ಮತ್ತು 45ನೇ ಸರ್ವೆ ನಂ. ಭಾಗಗಳು

ದಕ್ಷಿಣಕ್ಕೆ : 40ನೇ ಸರ್ವೆ ನಂ. ಜಮೀನು

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 6.12.2004 ರಂದು ನೀಡಿರುತ್ತೇನೆ.

ಪಿ.ಆರ್.98 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ).

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ),**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1 ಅಲಿ ಆಸ್ಕರ್ ರಸ್ತೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ದಾವಾ ಅರ್ಜಿ ಸಂಖ್ಯೆ:ಅನಿ(ಕೈ ಮತ್ತು ಇ) ಡಿಐಎಸ್:ಡಿ7:4250:2004-2005**

**ಉಪಸ್ಥಿತರು:** ಶ್ರೀ ಬಿ. ನಾಗರಾಜ, ಬಿ.ಎಸ್.ಸಿ., ಎಲ್ಎಲ್‌ಬಿ.,
ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

**ವಾದಿ :**

ಕಾರ್ಯದರ್ಶಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್
ನಿಯಮಿತ, ನಂ. 11, ಬುಲ್ ಟೆಂಪಲ್ ರಸ್ತೆ,
ಬಸವನಗುಡಿ, ಬೆಂಗಳೂರು-560004

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀಮತಿ ಸುಧಾ ತಂದೆ: ವಾಸುದೇವ ಪಿಂಚಕನ್,
ವಯಸ್ಸು-ವಯಸ್ಕ, ಉದ್ಯೋಗ-ಇಲ್ಲ,
ಮನೆ ನಂ. 44, ವೈಕುಂಠ ಲೇಔಟ್, ಸಿಲ್ವರ್ ಟೌನ್,
ಗೋಕುಲ ರಸ್ತೆ, ಹುಬ್ಬಳ್ಳಿ.
2. ಶ್ರೀ ವಾಸುದೇವ ಚಂಡುರಾಯ ಪಿಂಚಕನ,
ವಯಸ್ಸು-51, ಉದ್ಯೋಗ-ಸರಾಫ್‌ರುವ ಚಿನ್ನಾಭರಣಗಳ ಪರೀಕ್ಷಕರು,
ಮೌಲ್ಯಮಾಪಕರು, ಮನೆ ನಂ. 44, ಸಿಲ್ವರ್ ಟೌನ್,
ಗೋಕುಲ ರಸ್ತೆ, ಹುಬ್ಬಳ್ಳಿ-30

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು:**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ. 1,26,057-00 ಗಳನ್ನು ದಿನಾಂಕ: 1.7.2004 ರಿಂದ ಶೇಕಡ 16+2 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ: ಅನಿ (ಕೈ ಮತ್ತು ಇ) ಡಿಐಎಸ್/ಡಿ7/4250/2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2) ಒಂದನೇ ಪ್ರತಿವಾದಿಯು ಬ್ಯಾಂಕಿನ ಸದಸ್ಯನಾಗಿರುತ್ತಾರೆ. ಎರಡನೇ ಪ್ರತಿವಾದಿಯು ವಾದಿ ಬ್ಯಾಂಕಿನ ಹುಬ್ಬಳ್ಳಿ ಶಾಖೆಯ ಬಂಗಾರ ಆಭರಣಗಳ ಪರಿವೀಕ್ಷಕರಾಗಿದ್ದು, ಒಂದನೇ ಪ್ರತಿವಾದಿಯು ಆಭರಣಗಳ ಈಡಿನ ಮೇಲೆ ಸಾಲವನ್ನು ಮಂಜೂರು ಮಾಡಲು ಕೋರಿದ್ದು, ಸದರಿ ಆಭರಣಗಳನ್ನು ಎರಡನೇ ಪ್ರತಿವಾದಿಯು ಪರಿವೀಕ್ಷಿಸಿ ಬಂಗಾರದ ಆಭರಣಗಳು ನೈಜವೆಂದು ದೃಢೀಕರಿಸಿದ ನಂತರ ಸಾಲವನ್ನು ಬಿಡುಗಡೆ ಮಾಡಲಾಗಿರುತ್ತದೆ. ಆದರೆ ಸದರಿ ಬಂಗಾರದ ಆಭರಣಗಳು ನಕಲಿ ಆಭರಣಗಳಾಗಿರುತ್ತವೆ. ಒಂದನೇ ಪ್ರತಿವಾದಿಯವರು ಎರಡನೇ ಪ್ರತಿವಾದಿಯವರ ಮಗಳಾಗಿರುತ್ತಾಳೆ.

3) ವಾದಿಯು ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯವರ ತಂದೆಯಾದ 2ನೇ ಪ್ರತಿವಾದಿ ಶ್ರೀ ವಾಸುದೇವ ಚಂಡೂರಾಯ ಪಿಂಚಕಾನ ಇವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 2ನೇ ಪ್ರತಿವಾದಿ ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ 1ನೇ ಪ್ರತಿವಾದಿಯಾದ ಶ್ರೀಮತಿ ಸುಧಾ ವಾಸುದೇವ ಪಿಂಚಕಾನ ಇವರ 1/3 ಭಾಗ ಹಿಸ್ಸೆಯನ್ನು ಕಾಣಿಸಿರುವ ಏಕಮಾತ್ರ ಸ್ವತ್ತನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೆ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ ಡಿಕ್ರಿ ನೀಡಿದರೂ ಸದರಿ ಅವಾರ್ಡ್/ ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

4) ವಾದಿಯು ಸಲ್ಲಿಸಿರುವ ದಾವಾ ಅರ್ಜಿ ಮತ್ತು ಕಲಂ 103ರ ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೆ 1ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ: ಪರಭಾರೆ ಮಾಡದಂತೆ ತಡೆಯದೆ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

5) ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಆದ ನಾನು 1ನೇ ಪ್ರತಿವಾದಿಯ ತಂದೆ ಆದ 2ನೇ ಪ್ರತಿವಾದಿಯಾದ ಶ್ರೀ ವಾಸುದೇವ ಚಂಡುರಾಯ ಪಿಂಚಕಾನ ಇವರ ಹೆಸರಿನಲ್ಲಿ ಇರುವ ಸ್ಥಿರಾಸ್ತಿಯಲ್ಲಿ 1ನೇ ಪ್ರತಿವಾದಿಯಾದ ಶ್ರೀಮತಿ ಸುಧಾ ವಾಸುದೇವ ಪಿಂಚಕಾನ, ಇವರ 1/3 ಭಾಗ ಹಿಸ್ಸೆ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.1,30,000-00 (ಒಂದು ಲಕ್ಷ ಮೂವತ್ತು ಸಾವಿರ ರೂಪಾಯಿಗಳು) ಗಳನ್ನು ವಾದಿ ಬ್ಯಾಂಕಿನ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 17.1.2005 ಒಳಗಾಗಿ ಅಧಿಕೃತ ಚಲನ್/ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಶ್ರೀ ವಾಸುದೇವ ಚಂಡುರಾಯ ಪಿಂಚಕಾನ, ಇವರ ಹೆಸರಿನಲ್ಲಿ ಇರುವ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕು ಕಾಳಂಗಿ ಗ್ರಾಮದಲ್ಲಿನ ಸ್ಥಿರಾಸ್ತಿ ಸರ್ವೆ ನಂ. 43/2, ಇವುಗಳಲ್ಲಿ 1ನೇ ಪ್ರತಿವಾದಿಯಾದ ಶ್ರೀಮತಿ ಸುಧಾ ವಾಸುದೇವ ಪಿಂಚಕಾನ ಇವರ 1/3 ಭಾಗ ಹಿಸ್ಸೆ.

ಶಿರಸಿ ತಾಲ್ಲೂಕು ಕಾಳಂಗಿ ಗ್ರಾಮ ಸರ್ವೆ ನಂಬರ್ 43/2, ಇದರ ವಿಸ್ತೀರ್ಣ 11 ಎಕರೆ 14 ಗುಂಟೆ ಇವರ ಚಕ್ಕುಬಂದಿ.

(ಅವಿಭಾಜಿತ ಪಾಲು)

| | |
|---|---|
| ಪೂರ್ವಕ್ಕೆ : | 53ನೇ ಸರ್ವೆ ನಂಬರ್ ಜಮೀನು |
| ಪಶ್ಚಿಮಕ್ಕೆ : | 42ನೇ ಸರ್ವೆ ನಂಬರ್ ಜಮೀನು |
| ಉತ್ತರಕ್ಕೆ : | 44 ಮತ್ತು 45ನೇ ಸರ್ವೆ ನಂ. ಜಮೀನು |
| ದಕ್ಷಿಣಕ್ಕೆ : | 40ನೇ ಸರ್ವೆ ನಂ. ಜಮೀನು |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 6.12.2004 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಇತರೆ).

ಪಿ.ಆರ್.99

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ),**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1 ಅಲಿ ಅಸ್ಕರ್ ರಸ್ತೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ದಾವಾ ಅರ್ಜಿ ಸಂಖ್ಯೆ:ಅನಿ (ಕೈ ಮತ್ತು ಇ) ಡಿಐಎಸ್:ಡಿ7:4249:2004-2005**

**ಉಪಸ್ಥಿತರು:** ಶ್ರೀ ಬಿ. ನಾಗರಾಜ, ಬಿ.ಎಸ್.ಸಿ., ಎಲ್‌ಎಲ್‌ಬಿ., ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

| **ವಾದಿ :** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಕಾರ್ಯದರ್ಶಿ,<br>ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ<br>ಬ್ಯಾಂಕ್ ನಿಯಮಿತ, ನಂ. 11, ಬುಲ್<br>ಟೆಂಪಲ್ ರಸ್ತೆ, ಬಸವನಗುಡಿ,<br>ಬೆಂಗಳೂರು-560004 | | 1. ಶ್ರೀ ಸುಭಾಸ ಚಂಡುರಾಯ ಶೇಠ,<br>ವಯಸ್ಸು- 25, ಉದ್ಯೋಗ-ವ್ಯಾಪಾರ, ಕೇರಾಫ್ ವಿ.ಸಿ. ಪಿಂಚಕಾನ,<br>ನಂ. 44, ವೈಕುಂಠ ಲೇಔಟ್, ಸಿಲ್ವರ್ ಟೌನ್, ಗೋಕುಲ ರಸ್ತೆ, ಹುಬ್ಬಳ್ಳಿ.<br>2. ಶ್ರೀ ವಾಸುದೇವ ಚಂಡುರಾಯ<br>ಪಿಂಚಕಾನ, ವಯಸ್ಸು-51, ಉದ್ಯೋಗ-ಸರಾಫ್‌ರುವ ಚಿನ್ನಾಭರಣಗಳ<br>ಪರೀಕ್ಷಕರು, ಮೌಲ್ಯಮಾಪಕರು, ಮನೆ ನಂ. 44, ಸಿಲ್ವರ್ ಟೌನ್, ಗೋಕುಲ<br>ರಸ್ತೆ, ಹುಬ್ಬಳ್ಳಿ-30. |

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು:**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ. 1,44,728-00 ಗಳನ್ನು ದಿನಾಂಕ: 1.7.2004 ರಿಂದ ಶೇಕಡ 16+2 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ: ಅನಿ (ಕೈ ಮತ್ತು ಇ) ಡಿಐಎಸ್/ಡಿ7/4249/2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2) ಒಂದನೇ ಪ್ರತಿವಾದಿಯು ಬ್ಯಾಂಕಿನ ಸದಸ್ಯನಾಗಿರುತ್ತಾರೆ. ಎರಡನೇ ಪ್ರತಿವಾದಿಯು ವಾದಿ ಬ್ಯಾಂಕಿನ ಹುಬ್ಬಳ್ಳಿ ಶಾಖೆಯ ಬಂಗಾರ ಆಭರಣಗಳ ಪರಿವೀಕ್ಷಕರಾಗಿದ್ದು, ಒಂದನೇ ಪ್ರತಿವಾದಿಯು ಆಭರಣಗಳ ಈಡಿನ ಮೇಲೆ ಸಾಲವನ್ನು ಮಂಜೂರು ಮಾಡಲು ಕೋರಿದ್ದು, ಸದರಿ ಆಭರಣಗಳನ್ನು ಎರಡನೇ ಪ್ರತಿವಾದಿಯು ಪರಿವೀಕ್ಷಿಸಿ ಬಂಗಾರದ ಆಭರಣಗಳು ನೈಜವೆಂದು ದೃಢೀಕರಿಸಿದ ನಂತರ ಸಾಲವನ್ನು ಬಿಡುಗಡೆ ಮಾಡಲಾಗಿರುತ್ತದೆ. ಆದರೆ ಸದರಿ ಬಂಗಾರದ ಆಭರಣಗಳು ನಕಲಿ ಆಭರಣಗಳಾಗಿರುತ್ತವೆ. ಮೇಲಾಗಿ ಒಂದನೇ ಪ್ರತಿವಾದಿಯವರು ಎರಡನೇ ಪ್ರತಿವಾದಿಯವರ ಸಹೋದರನಾಗಿರುತ್ತಾನೆ.

3) ವಾದಿಯು ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 2ನೇ ಪ್ರತಿವಾದಿ ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಏಕಮಾತ್ರ ಸ್ವತ್ತನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೆ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ಡಿಕ್ರಿ ನೀಡಿದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

4) ವಾದಿಯು ಸಲ್ಲಿಸಿರುವ ದಾವಾ ಅರ್ಜಿ ಮತ್ತು ಕಲಂ 103ರ ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೆ 1ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ: ಪರಭಾರೆ ಮಾಡದಂತೆ/ ತಡೆಯದೆ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

5) ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಆದ ನಾನು 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.1,45,000-00 (ಒಂದು ಲಕ್ಷ ನಲವತ್ತೈದು ಸಾವಿರ ರೂಪಾಯಿಗಳು) ಗಳನ್ನು ವಾದಿ ಬ್ಯಾಂಕಿನ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 17.1.2005 ಒಳಗಾಗಿ ಅಧಿಕೃತ ಚಲನ್/ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಪ್ರಕರಣದ 1ನೇ ಪ್ರತಿವಾದಿಯಾದ ಶ್ರೀ ಸುಭಾಸ ಚಂದೂರಾಯ ಶೇಠ, ಇವರ ಹೆಸರಿನಲ್ಲಿ ಇರುವ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ಕಾಳಂಗಿ ಗ್ರಾಮದಲ್ಲಿನ ಸರ್ವೆ ನಂ. 41/A/1, ಸ್ಥಿರಾಸ್ತಿ.

| ಕ್ರಮ ಗೂ.ಅ | ಸರ್ವೆ ನಂ. | ಕ್ಷೇತ್ರ | ಆಸ್ತಿಯ ವರ್ಣನೆ | ಸ್ಥಳ | ಕಂದಾಯ | ಮಾಲೀಕನ ಹೆಸರು ಸಂಖ್ಯೆ ಮತ್ತು ಹಿಸ್ಸೆ. |
|---|---|---|---|---|---|---|
| 1 | 41/A/1 | 2 ಎಕರೆ 38 ಗುಂಟೆ | ಮಸಾರಿ ಜಮೀನು | ಕಾಳಂಗಿ | ಬನವಾಸಿ 762 | ಸುಭಾಸ ಚಂದೂರಾಯ ಶೇಠ |
| 2 | 48 | 2 ಎಕರೆ 8 ಗುಂಟೆ | ಗೂಚ್ಚು ಜಮೀನು | ಕಾಳಂಗಿ | ಬನವಾಸಿ 1.70 | ಸುಭಾಸ ಚಂದೂರಾಯ ಶೇಠ |

ಕಾಳಂಗಿ ಗ್ರಾಮ ಸರ್ವೆ ನಂಬರ್ 41/A/1, ಇದರ ವಿಸ್ತೀರ್ಣ 2 ಎಕರೆ 38 ಗುಂಟೆ ಇದರ ಚಕ್ಕುಬಂದಿ.

ಪೂರ್ವಕ್ಕೆ : ಸರ್ವೆ ನಂ.42 ಮತ್ತು 41/B ಭಾಗಗಳ ಜಮೀನು
ಪಶ್ಚಿಮಕ್ಕೆ : ಸರ್ವೆ ನಂ.25
ಉತ್ತರಕ್ಕೆ : ಸರ್ವೆ ನಂ.24
ದಕ್ಷಿಣಕ್ಕೆ : ಸರ್ವೆ ನಂ.40

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 6.12.2004 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಅಪರ ನಿಬಂಧಕರು,
ಪಿ.ಆರ್.100 (ಕೈಗಾರಿಕೆ ಮತ್ತು ಇತರೆ).

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ),**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1 ಅಲಿ ಆಸ್ಕರ್ ರಸ್ತೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ದಾವಾ ಅರ್ಜಿ ಸಂಖ್ಯೆ:ಅನಿ (ಕೈ ಮತ್ತು ಇ) ಡಿಐಎಸ್:ಡಿ7:4247:2004-2005**

**ಉಪಸ್ಥಿತರು:** ಶ್ರೀ ಬಿ. ನಾಗರಾಜ, ಬಿ.ಎಸ್.ಸಿ., ಎಲ್‌ಎಲ್‌ಬಿ.,
ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಇತರೆ)

**ವಾದಿ :**
ಕಾರ್ಯದರ್ಶಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್
ನಿಯಮಿತ, ನಂ. 11, ಬುಲ್ ಟೆಂಪಲ್ ರಸ್ತೆ,
ಬಸವನಗುಡಿ, ಬೆಂಗಳೂರು-560004

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀ ಬಾಲಚಂದ್ರ ಮೋಹನ ಶೇಟ್,
ವಯಸ್ಸು- ವಯಸ್ಕ, ಉದ್ಯೋಗ-ವ್ಯಾಪಾರ,
ನಂ. 44, ವೈಕುಂಠ ಲೇಔಟ್, ಸಿಲ್ವರ್ ಟೌನ್, ಗೋಕುಲ ರಸ್ತೆ, ಹುಬ್ಬಳ್ಳಿ.
2. ಶ್ರೀ ವಾಸುದೇವ ಚಂಡುರಾಯ
ಪಿಂಚಕಾನ, ವಯಸ್ಸು-51, ಉದ್ಯೋಗ-ಸರಾಫ್‌ರುವ ಚಿನ್ನಾಭರಣಗಳ
ಪರೀಕ್ಷಕರು, ಮೌಲ್ಯಮಾಪಕರು, ಮನೆ ನಂ. 44, ಸಿಲ್ವರ್ ಟೌನ್, ಗೋಕುಲ
ರಸ್ತೆ, ಹುಬ್ಬಳ್ಳಿ-30.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು:**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ. 1,93,259-00 ಗಳನ್ನು ದಿನಾಂಕ: 1.7.2004 ರಿಂದ ಶೇಕಡ 16+2 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ: ಅನಿ (ಕೈ ಮತ್ತು ಇ) ಡಿಐಎಸ್/ಡಿ7/4247/2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2) ಒಂದನೇ ಪ್ರತಿವಾದಿಯು ಬ್ಯಾಂಕಿನ ಸದಸ್ಯನಾಗಿರುತ್ತಾರೆ. ಎರಡನೇ ಪ್ರತಿವಾದಿಯು ವಾದಿ ಬ್ಯಾಂಕಿನ ಹುಬ್ಬಳ್ಳಿ ಶಾಖೆಯ ಬಂಗಾರ ಆಭರಣಗಳ ಪರಿವೀಕ್ಷಕರಾಗಿದ್ದು, ಒಂದನೇ ಪ್ರತಿವಾದಿಯು ಆಭರಣಗಳ ಈಡಿನ ಮೇಲೆ ಸಾಲವನ್ನು ಮಂಜೂರು ಮಾಡಲು ಕೋರಿದ್ದು, ಸದರಿ ಆಭರಣಗಳನ್ನು ಎರಡನೇ ಪ್ರತಿವಾದಿಯು ಪರಿವೀಕ್ಷಿಸಿ ಬಂಗಾರದ ಆಭರಣಗಳು ನೈಜವೆಂದು ದೃಢೀಕರಿಸಿದ ನಂತರ ಸಾಲವನ್ನು ಬಿಡುಗಡೆ ಮಾಡಲಾಗಿರುತ್ತದೆ. ಆದರೆ ಸದರಿ ಬಂಗಾರದ ಆಭರಣಗಳು ನಕಲಿ ಆಭರಣಗಳಾಗಿರುತ್ತವೆ. ಮೇಲಾಗಿ ಒಂದನೇ ಪ್ರತಿವಾದಿಯವರು ಎರಡನೇ ಪ್ರತಿವಾದಿಯವರ ಸಂಬಂಧಿಯಾಗಿರುತ್ತಾರೆ.

3) ವಾದಿಯು ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯವರ ತಂದೆಯಾದ ಶ್ರೀ ಶೇಟ್ ಮೋಹನ ಚಂದೂರಾಯ, ಇವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯಲ್ಲಿ 1ನೇ ಪ್ರತಿವಾದಿಯಾದ ಶ್ರೀ ಬಾಲಚಂದ್ರ ಮೋಹನ ಶೇಟ್ ಇವರ 1/3 ಭಾಗ ಹಿಸ್ಸೆಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 2ನೇ ಪ್ರತಿವಾದಿ ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಏಕಮಾತ್ರ ಸ್ವತ್ತನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೆ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ದ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ಡಿಕ್ರಿ ನೀಡಿದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

4) ವಾದಿಯು ಸಲ್ಲಿಸಿರುವ ದಾವಾ ಅರ್ಜಿ ಮತ್ತು ಕಲಂ 103ರ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೆ 1ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ/ ಪರಭಾರೆ ಮಾಡದಂತೆ: ತಡೆಯದೆ ಇದ್ದಲ್ಲಿ,

ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

5) ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಆದ ನಾನು 1ನೇ ಪ್ರತಿವಾದಿಯವರ ತಂದೆ ಆದ ಶ್ರೀ ಶೇಟ್ ಮೋಹನ ಚಂದೂರಾಯ, ಇವರ ಹೆಸರಿನಲ್ಲಿ ಇವರ ಸ್ಥಿರಾಸ್ತಿಯಲ್ಲಿ 1ನೇ ಪ್ರತಿವಾದಿಯಾದ ಶ್ರೀ ಬಾಲಚಂದ್ರಮೋಹನ ಶೇತ, ಇವರ 1/3 ಭಾಗ ಹಿಸ್ಸೆ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.1,95,000-00 (ಒಂದು ಲಕ್ಷ ತೊಂಭತ್ತೈದು ಸಾವಿರ ರೂಪಾಯಿಗಳು) ಗಳನ್ನು ವಾದಿ ಬ್ಯಾಂಕಿನ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 17.1.2005 ಒಳಗಾಗಿ ಅಧಿಕೃತ ಚಲನ್/ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಶೇಟ್ ಮೋಹನ ಚಂದೂರಾಯ ಇವರ ಹೆಸರಿನಲ್ಲಿ ಇರುವ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕು ಕಾಳಂಗಿ ಗ್ರಾಮದಲ್ಲಿ ಸರ್ವೆ ನಂ. 43/2, ಇವುಗಳಲ್ಲಿ 1ನೇ ಪ್ರತಿವಾದಿಯಾದ ಶ್ರೀ ಬಾಲಚಂದ್ರ ಮೋಹನ ಶೇತ ಇವರ 1/3 ಭಾಗ ಹಿಸ್ಸೆ.

ಶಿರಸಿ ತಾಲ್ಲೂಕು ಕಾಳಂಗಿ ಗ್ರಾಮ ಸರ್ವೆ ನಂಬರ್ 43/2, ಇದರ ವಿಸ್ತೀರ್ಣ 11 ಎಕರೆ 14 ಗುಂಟೆ ಇದರ ಚಕ್ಕುಬಂದಿ.

(ಅವಿಭಾಜಿತ ಪಾಲು)

ಪೂರ್ವಕ್ಕೆ : 53ನೇ ಸರ್ವೆ ನಂಬರ್ ಜಮೀನು

ಪಶ್ಚಿಮಕ್ಕೆ : 42ನೇ ಸರ್ವೆ ನಂಬರ್ ಜಮೀನು

ಉತ್ತರಕ್ಕೆ : 44ನೇ ಮತ್ತು 45ನೇ ಸರ್ವೆ ನಂ. ಭಾಗಗಳು.

ದಕ್ಷಿಣಕ್ಕೆ : 40ನೇ ಸರ್ವೆ ನಂ. ಜಮೀನು

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 6.12.2004 ರಂದು ನೀಡಿರುತ್ತೇನೆ.

ಪಿ.ಆರ್.101 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ).

**ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-5**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**
**ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ/ಸಿಆರ್-13/2004 ದಿನಾಂಕ: 28ನೇ ಡಿಸೆಂಬರ್ 2004**

**ಅರ್ಜಿದಾರರು :** **ವಿರುದ್ಧ**

1. ಶ್ರೀಮತಿ ಶಾಂತಮ್ಮ ಕೋಂ ಲೇಟ್ ಮಧು @ ಕುಮಾರ್ @ ರಾಮಸ್ವಾಮಿ
2. ಕು: ರೂಪ ಬಿನ್ ಲೇಟ್ ಮಧು @ ಕುಮಾರ್ @ ರಾಮಸ್ವಾಮಿ
3. ಕು: ಆಶಾ ಬಿನ್ ಲೇಟ್ ಮಧು @ ಕುಮಾರ್ @ ರಾಮಸ್ವಾಮಿ
4. ಕು: ನಂದಿನಿ ಬಿನ್ ಲೇಟ್ ಮಧು @ ಕುಮಾರ್ @ ರಾಮಸ್ವಾಮಿ
5. ಮಾರುತಿ ಬಿನ್ ಲೇಟ್ ಮಧು @ ಕುಮಾರ್ @ ರಾಮಸ್ವಾಮಿ
6. ಶ್ರೀಮತಿ ಲಕ್ಕಮ್ಮ ಕೋಂ ಲೇಟ್ ಭೀಮಣ್ಣ.
ವಾಸ: ಮಗ್ಗ ಬೀದಿ, ಗುಬ್ಬಿ ಟೌನ್, ತುಮಕೂರು ಜಿಲ್ಲೆ.

**ಪ್ರತಿವಾದಿಗಳು:**

1. ಶ್ರೀ ಹೊನ್ನೇಗೌಡ, ಬಿನ್ ಬೋಜಪ್ಪ, ಮಾದೇನಹಳ್ಳಿ ಗ್ರಾಮ, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ.
2. ದಿ. ಡಿವಿಜನಲ್ ಮ್ಯಾನೇಜರ್, ದಿ ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ.ಲಿ.,
ಡಿವಿಜನಲ್ ಆಫೀಸ್-2, ನಂ. 2, ನಂ. 64, ಮಿಷನ್ ರಸ್ತೆ, ಬೆಂಗಳೂರು.

**ಪ್ರಕಟಣೆ:**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 27.12.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1ನೇ ಅರ್ಜಿದಾರರ ಪತಿ 2, 3, 4 ಮತ್ತು 5ನೇ ಅರ್ಜಿದಾರರ ತಂದೆ ಹಾಗೂ 6ನೇ ಅರ್ಜಿದಾರರ ಮಗ ಶ್ರೀ ಮಧು ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎನ್. ಬಿ. ರಾಮಚಂದ್ರ**

ಪಿ.ಆರ್.103 ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ, ಉಪ ವಿಭಾಗ-5, ಬೆಂಗಳೂರು-560029

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ನಡುವಳಿಕೆಗಳು

## ನಂ: ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್-15/2002-03 ದಿನಾಂಕ: 27ನೇ ಡಿಸೆಂಬರ್ 2004

**ವಿಷಯ :** ಸಮಾಪನೆಗೊಂಡಿರುವ ಹಿರಿಯೂರು ಟೌನ್ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ಹಿರಿಯೂರು ಇದರ ರದ್ದತಿಯ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪ್ರಸ್ತಾವನೆ ಸಂಖ್ಯೆ: ಸನಿ 30: ಸಮಾಪನೆ: ಸಿಆರ್-35/2004-05 ದಿನಾಂಕ: 21.12.2004.
2. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಡಿ: ಎಲ್‌ಕ್ಯೂಡಿ:35: 83-84 ದಿನಾಂಕ: 4.4.84

**ಪೀಠಿಕೆ:**

ಪ್ರಸ್ತುತ ವಿಷಯದಲ್ಲಿ ನಮೂದಿಸಿದ ಸಹಕಾರ ಸಂಘದ ನೋಂದಣಿ ರದ್ದುಪಡಿಸುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರು ಮೇಲ್ಕಂಡ ಉಲ್ಲೇಖ (1) ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸಮೀಕ್ಷಣೆ ಮಾಡಲಾಗಿ ಸಂಘಕ್ಕೆ ಬರತಕ್ಕ ಮತ್ತು ಸಂಘವು ಕೊಡತಕ್ಕ ಮೊಬಲಗು ನಿವ್ವಳ ನಷ್ಟ ಹೋಕುಬಾಕಿಯಾಗಿರುವುದರಿಂದ ಅದರ ವಸೂಲಿಗೆ ಹಾಗೂ ವಿಲೇವಾರಿಗೂ ಯಾವ ರಹ ಇಲ್ಲದ್ದರಿಂದ ಆಸ್ತಿ ಜವಾಬ್ದಾರಿ ಇಲ್ಲವೆಂದು ಧೃಡಪಟ್ಟಿರುವುದರಿಂದ ಇದರ ನೋಂದಣಿಯನ್ನು ರದ್ದು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಅವರ ಶಿಫಾರಸ್ಸನ್ನು ಪರಾಂಭರಿಸಿ ಈ ಕೆಳಕಂಡ ಆದೇಶವನ್ನು ನೀಡಲಾಗಿದೆ.

### ಆದೇಶ

ಮೇಲ್ಕಂಡ ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀಮತಿ: ಕೆ. ಎಂ. ಆಶಾ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಆದ ನಾನು ಪರಿಸಮಾಪನೆಗೊಳಿಸಲ್ಪಟ್ಟಿದ್ದ ಹಿರಿಯೂರು ಟೌನ್ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ಹಿರಿಯೂರು ಇದರ ನೋಂದಣಿ ಸಂಖ್ಯೆ: ಎಆರ್‌ಸಿ:441/4615/75-76 ದಿನಾಂಕ: 24.6.76 ಯನ್ನು ರದ್ದುಗೊಳಿಸಿ ಈ ಮೂಲಕ ಆದೇಶ ಹೊರಡಿಸಿರುತ್ತೇನೆ. ಈ ರದ್ಧತಿಯ ಅನ್ವಯ ಈ ದಿನಾಂಕದಿಂದ ಸದರಿ ಸಂಘವು ವಿಸರ್ಜಿಸಲ್ಪಟ್ಟಿತೆಂದೂ ಮತ್ತು ಸದರಿ ಸಂಘದ ಆಸ್ತಿತ್ವ ಇಲ್ಲವೆಂದೂ ಪರಿಗಣಿಸತಕ್ಕದ್ದು.

ನನ್ನ ಸ್ವಹಸ್ತ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ದಿನಾಂಕ: 27.12.2004 ರಂದು ಆದೇಶ ನೀಡಲಾಗಿದೆ.

**ಕೆ. ಎಂ. ಆಶಾ**

ಪಿ.ಆರ್.104 ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ.

**Government of India,**
**Ministry of Labour (Labour Bureau)**
**No. 112/1(KTK)/2001-FLS**
'Cleremount' Shimla-171004

## CONSUMER PRICE INDEX NUMBERS FOR INDUSTRIAL WORKERS (BASE-1982=100)

State: Karnataka Month: October, 2004

| Code | Group/Sub-group/ Centre | Bangalore | Belgaum | Hubli Dharwar | Mercara |
|---|---|---|---|---|---|
| | 1 | 2 | 3 | 4 | 5 |
| 1000 | **I. A:FOOD:** | | | | |
| 1100 | (a) Cereals & Products | 432 | 558 | 472 | 459 |
| 1200 | (b) Pulses & Products | 561 | 541 | 563 | 567 |
| 1300 | (c) Oils & Fats | 422 | 394 | 403 | 424 |
| 1400 | (d) Meat, Fish & Eggs | 612 | 571 | 573 | 623 |
| 1500 | (e) Milk & Products | 377 | 529 | 441 | 460 |
| 1600 | (f) Condiments & Spices | 498 | 601 | 561 | 474 |
| 1700 | (g) Vegetables & Fruits | 496 | 429 | 595 | 472 |
| 1800 | (h) Other Food | 718 | 742 | 711 | 780 |
| 1000 | **I-A FOOD GROUP** | 512 | 569 | 536 | 537 |
| 2000 | I-Pan, Supari, Tobacco & Intoxicants | 657 | 606 | 572 | 536 |
| 3000 | II-Fuel & Light | 817 | 647 | 569 | 456 |
| 4000 | III-Housing Index | 585 | 717 | 577 | 195 |
| 5000 | IV-Clothing, Bedding & Footwear | 279 | 269 | 324 | 430 |
| 6000 | **V-Miscellaneous:** | | | | |
| 6100 | (a) Medical Care | 491 | 547 | 486 | 507 |

| | 1 | 2 | 3 | 4 | 5 |
|---|---|---|---|---|---|
| 6200 | (b) Education, Recreation & Amusement | 422 | 707 | 566 | 635 |
| 6300 | (c) Transport & Communication | 621 | 451 | 620 | 635 |
| 6400 | (d) Personal Care & effects | 490 | 444 | 508 | 462 |
| 6500 | (e) Others | 512 | 564 | 443 | 470 |
| 6600 | Miscellaneous Group | 504 | 533 | 509 | 514 |
| | **GENERAL INDEX** | 510 | 568 | 531 | 500 |

**R. S. NEGI**
Deputy Director.

**Government of India,**
**Ministry of Labour (Labour Bureau)**
**No. 112/1(KTK)/2001-FLS**

'Cleremount' Shimla-171004

**CONSUMER PRICE INDEX NUMBERS FOR INDUSTRIAL WORKERS (BASE-1982=100)**

State: Karnataka Month: October, 2004

| Code | Group/Sub-group/ Centre | Bangalore | Belgaum | Hubli Dharwar | Mercara |
|---|---|---|---|---|---|
| | 1 | 2 | 3 | 4 | 5 |
| 1000 | **I. A:FOOD:** | | | | |
| 1100 | (a) Cereals & Products | 432 | 558 | 472 | 459 |
| 1200 | (b) Pulses & Products | 561 | 541 | 563 | 567 |
| 1300 | (c) Oils & Fats | 422 | 394 | 403 | 424 |
| 1400 | (d) Meat, Fish & Eggs | 612 | 571 | 573 | 623 |
| 1500 | (e) Milk & Products | 377 | 529 | 441 | 460 |
| 1600 | (f) Condiments & Spices | 498 | 601 | 561 | 474 |
| 1700 | (g) Vegetables & Fruits | 496 | 429 | 595 | 472 |
| 1800 | (h) Other Food | 718 | 742 | 711 | 780 |
| 1000 | **I-A FOOD GROUP** | 512 | 569 | 536 | 537 |
| 2000 | I-Pan, Supari, Tobacco & Intoxicants | 657 | 606 | 572 | 536 |
| 3000 | II-Fuel & Light | 817 | 647 | 569 | 456 |
| 4000 | III-Housing Index | 585 | 717 | 577 | 195 |
| 5000 | IV-Clothing, Bedding & Footwear | 279 | 269 | 324 | 430 |
| 6000 | **V-Miscellaneous:** | | | | |
| 6100 | (a) Medical Care | 491 | 547 | 486 | 507 |
| 6200 | (b) Education, Recreation & Amusement | 422 | 707 | 566 | 635 |
| 6300 | (c) Transport & Communication | 621 | 451 | 620 | 635 |
| 6400 | (d) Personal Care & effects | 490 | 444 | 508 | 462 |
| 6500 | (e) Others | 512 | 564 | 443 | 470 |
| 6600 | Miscellaneous Group | 504 | 533 | 509 | 514 |
| | **GENERAL INDEX** | 510 | 568 | 531 | 500 |

**R. S. NEGI**
Deputy Director.

**GOVERNMENT OF KARNATAKA, BANGALORE-1.**
**Consumer Price Index Numbers For Industrial Workers**

No. DES 24 PWX 2004 Month: October 2004
State: Karnataka Base: 1987-88=100 Date : 30-12-2004

| | Group/Sub-Group | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Mysore | Rai chur | Tum kur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. | **FOOD:** (a) Cereals & Products | 324 | 400 | 374 | 353 | 356 | 332 | 345 | 340 | 290 | 376 | 341 | 324 |
| | (b) Pulses & Products | 300 | 318 | 313 | 345 | 316 | 293 | 324 | 323 | 300 | 308 | 319 | 318 |
| | (c) Oils & Fats | 250 | 280 | 248 | 264 | 275 | 262 | 289 | 312 | 265 | 277 | 273 | 263 |
| | (d) Meat, Fish & Eggs | 342 | 374 | 365 | 414 | 346 | 342 | 312 | 347 | 530 | 361 | 385 | 348 |
| | (e) Milk & Products | 343 | 262 | 295 | 313 | 306 | 267 | 251 | 342 | 289 | 257 | 307 | 281 |
| | (f) Condiments & Spices | 239 | 320 | 361 | 406 | 316 | 268 | 288 | 236 | 244 | 257 | 271 | 313 |
| | (g) Vegetables & Fruits | 232 | 292 | 269 | 341 | 298 | 222 | 273 | 288 | 232 | 286 | 230 | 491 |
| | (h) Other Food | 304 | 360 | 332 | 347 | 292 | 306 | 307 | 297 | 318 | 290 | 312 | 344 |
| | **FOOD GROUP** | 301 | 345 | 335 | 347 | 322 | 297 | 309 | 323 | 328 | 313 | 318 | 331 |

| 1 | | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|---|
| II. | Pan, Supari, Tobacco & Intoxicants | 308 | 350 | 341 | 342 | 387 | 439 | 344 | 472 | 294 | 323 | 352 | 381 |
| III. | Fuel & Light | 305 | 312 | 270 | 451 | 290 | 319 | 342 | 329 | 271 | 308 | 364 | 291 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 255 | 253 | 220 | 373 | 272 | 260 | 331 | 382 | 242 | 292 | 402 | 210 |
| VI. | **MISCELLANEOUS:**<br>(a) Medical Care | 546 | 439 | 370 | 293 | 282 | 253 | 381 | 319 | 336 | 295 | 394 | 219 |
| | (b) Education, Recreation & Amusement | 341 | 314 | 521 | 207 | 389 | 400 | 309 | 309 | 344 | 405 | 375 | 366 |
| | (c) Transport & Communication | 415 | 395 | 327 | 333 | 595 | 352 | 347 | 560 | 420 | 413 | 388 | 374 |
| | (d) Personal Care & effects | 263 | 276 | 263 | 284 | 317 | 257 | 271 | 295 | 269 | 320 | 258 | 267 |
| | (e) Others<br>Miscellaneous Group Index | 320<br>359 | 347<br>331 | 282<br>336 | 422<br>307 | 295<br>349 | 274<br>300 | 280<br>307 | 282<br>310 | 235<br>311 | 296<br>350 | 402<br>351 | 246<br>283 |
| | **GENERAL INDEX** | 284 | 304 | 292 | 326 | 293 | 274 | 290 | 306 | 291 | 285 | 312 | 270 |
| | To convert to Base 1960 Multiply by Linking Factor. | 7.39 | 9.19 | 8.27 | … | 8.26 | 8.56 | 9.25 | 7.92 | 9.31 | 9.05 | … | … |

**R. S. NEGI**
Deputy Director.

PR-105

**IN THE COURT OF COMMISSIONER FOR WORKMEN'S COMPENSATION, BIDAR.**

**No. LOB/WCA/Cr-68/2004**

**Applicants:** **V/s** **Respondents:**

1. Bharat Bai W/o Late Gnyanender Age 38 years Occ: Household, R/o Vilaspur. Tq & Dist Bidar & 5 others.

V/s

1. Vithal Rao S/o Ram Rao Age Major, R/o Vilaspur Tq. & Dist, Bidar.
2. Manager, New India Assuracne Co. Ltd., Bidar.

**PROCLAMATION**

Smt Bharat Bai W/o Gnyanender Vilaspur Tq & Dist Bidar have/has filed application in this court claiming compensation stating that Late: Gnyanender was working as Coolie under the Respondent No. I he met with an accident arising out of and during the course of employment as a result he died on 9.11.2004.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

Commissioner for Workmen's
Compensation, Bidar.

PR-102

**ನೋಂದಣಿ ಮತ್ತು ಮುದ್ರಾಂಕಗಳ ಇಲಾಖೆ**

**ನೇಮಕಾತಿ ಆದೇಶ**

**ಜಿಲ್ಲಾ ನೋಂದಣಾಧಿಕಾರಿಗಳು, ಕೊಪ್ಪಳ ಇವರ ನಡವಳಿಗಳು**

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೊಪ್ಪಳ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :**

1. ಮಾನ್ಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ:ಜಿನೋಕೊ:ಬ್ಯಾಕ್‌ಲಾಗ್: 2001-02/634 ದಿನಾಂಕ: 17.01.2002.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3. ಮಾನ್ಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: EST-1-273/ 2001-02 ದಿನಾಂಕ: 1.08.2002 (ದಿನಾಂಕ: 8.8.2002 ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
4. ಮಾನ್ಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ EST-1-273/ 2001-02 ದಿನಾಂಕ: 23.11.2004
5. ಮಾನ್ಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-273/ 2001-02 ದಿನಾಂಕ: 14.12.2004.

**ಪ್ರಸ್ತಾವನೆ:**

ಈ ಇಲಾಖೆಯ ಕೊಪ್ಪಳ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1. | ಕೊಪ್ಪಳ ಜಿಲ್ಲೆ | ಒಂದು | ಒಂದು | ಎರಡು |

ಈ ಬ್ಯಾಕ್‌ಲಾಗ್ ಹುದ್ದೆಗಳು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ಮಾನ್ಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು ಮೆರಿಟ್ ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ಮಾನ್ಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಅಭ್ಯರ್ಥಿಗಳನ್ನು ಮಾನ್ಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಗಳನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಅಭ್ಯರ್ಥಿಗಳನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಜಿ.ನೊ.ಕೊ/ಸಿಬ್ಬಂದಿ/:2004-05/1070-1073 ದಿನಾಂಕ: 27ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ, ಉಲ್ಲೇಖ (5) ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಅಭ್ಯರ್ಥಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 3000-75-3450-100-4450-125-5450 ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ ಹಾಗೂ ಸದರಿ ಅಭ್ಯರ್ಥಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಎಸ್‌ಸಿ: ಎಸ್‌ಟಿ | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ವಿವೇಕಾನಂದ ಶಂಕರ ಕುರೇರ S/o ಶಂಕರ್ ಸಾಬಣ್ಣಾ ಕುರೇರ, ಶೆಟ್ಟರ್ ಬಿಲ್ಡಿಂಗ್ ನಂ. 10/1 ನಗರ್‌ಕರ್ ಕಾಲೋನಿ 1ನೇ ಕ್ರಾಸ್, ಧಾರವಾಡ-580007 | ಎಸ್‌ಟಿ | 17.04.1969 | 33.04.20 | S.S.L.C. 70.18% | ಉಪನೋಂದಣಿ ಕಛೇರಿ ಯಲಬುರ್ಗಾ, ಕೊಪ್ಪಳ ಜಿಲ್ಲೆ | ಪರಿಶಿಷ್ಟ ಪಂಗಡ ಗ್ರಾಮೀಣ ಅಭ್ಯರ್ಥಿ ಮುಖ್ಯಪಟ್ಟಿ. |

ಎಸ್.ಎಸ್.ಎಲ್‌ಸಿ. ಅಂಕಪಟ್ಟಿಯ ನೋಂದಣಿ ಸಂಖ್ಯೆ: 284580/ ಏಪ್ರಿಲ್ 1984 ರ ಪ್ರಕಾರ ಸದರಿ ಅಭ್ಯರ್ಥಿಯ ಜನ್ಮ ದಿನಾಂಕವು 17.04.1969 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಗಳನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದುಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಗಳನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.

5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕಾ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರಗಳನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯಾ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ. ಎಲ್. ನಾರಾಯಣ - Vs - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3ನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ನ್ನು ಈ ಕಛೇರಿಗೆ ಬರೆದು ಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೆ ರದ್ದು ಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ. ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ಪಿ.ಆರ್.106 ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು, ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2 ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮಪ್ರ:ಎಸ್‌ಆರ್-7:2005 ದಿನಾಂಕ: 18ನೇ ಜನವರಿ 2005**

**ಅರ್ಜಿದಾರರು :**

1. ರೇಣುಕಾ ಗಂಡ ಸಿದ್ದಪ್ಪ ಅಂಬಿಗರ್
2. ಅಶ್ವಿನಿ ತಂದೆ ಸಿದ್ದಪ್ಪ ಅಂಬಿಗರ್
3. ಕುಸುಮ ತಂದೆ ಸಿದ್ದಪ್ಪ ಅಂಬಿಗರ್
4. ಭಾಗೀರಥಿ ತಂದೆ ಸಿದ್ದಪ್ಪ ಅಂಬಿಗರ್
5. ರಾಚವ್ವ ಗಂಡ ದ್ಯಾವಪ್ಪ ಅಂಬಿಗರ್
   ವಾಸ: ಮನೆ ನಂ. 243:ಎ ಗಾಂಧಿನಗರ, ಗುನಾಪೂರ ರೋಡ್, ಬಿಜಾಪುರ.

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀಮತಿ ಬಿಬಿಹಜಾರಾ ಗಂಡ ಸೈಯದ್‌ಹಮೀದ್ ಕಿತ್ತೂರ್
   ವಾಸ: ಪಿಡಬ್ಲ್ಯೂಡಿ ಕಛೇರಿಯ ಹಿಂಭಾಗ ಸ್ಟೇಶನ್ ರೋಡ್, ಬಿಜಾಪುರ
2. ದಿ ಬ್ರಾಂಚ್ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಸೂರೆನ್ಸ್ ಕಂಪನಿ ಲಿಮಿಟೆಡ್, ಬಿಜಾಪುರ.

**ಪ್ರಕಟಣೆ**

ಶ್ರೀ: ಶ್ರೀಮತಿ: 1) ರೇಣುಕಾ ಗಂಡ ಸಿದ್ದಪ್ಪ ಅಂಬಿಗರ್ 2) ಅಶ್ವಿನಿ ತಂದೆ ಸಿದ್ದಪ್ಪ ಅಂಬಿಗರ್ 3) ಕುಸುಮ ತಂದೆ ಸಿದ್ದಪ್ಪ ಅಂಬಿಗರ್ 4) ಭಾಗೀರಥಿ ತಂದೆ ಸಿದ್ದಪ್ಪ ಅಂಬಿಗರ್ 5) ರಾಚವ್ವ ಗಂಡ ದ್ಯಾವಪ್ಪ ಅಂಬಿಗರ್ ಇವರುಗಳಾದ ತಾವು ಮೃತ ಸಿದ್ದಪ್ಪ ತಂದೆ ದ್ಯಾವಪ್ಪ ಅಂಬಿಗರ್ ಇವರ ಹೆಂಡತಿ ಮಕ್ಕಳು ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಸಿದ್ದಪ್ಪ ತಂದೆ ದ್ಯಾವಪ್ಪ ಅಂಬಿಗರ್ ಇವರು ಒಂದನೇ ಪ್ರತಿವಾದಿಗಳಾದ ಶ್ರೀಮತಿ ಬಿಬಿಹಜರಾ ಗಂಡ ಸೈಯದ್‌ಹಮೀದ್ ಕಿತ್ತೂರ್ ಇವರ ಟ್ರಕ್ ನಂ. ಕೆಎ 28:ಎ 21ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್.178 ಕಾರ್ಮಿಕ ಪರಿಹಾರ ಆಯುಕ್ತರು ಉಪ ವಿಭಾಗ-2 ಬಿಜಾಪುರ ಜಿಲ್ಲೆ ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2 ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮಪ್ರ:ಎಸ್‌ಆರ್-220:2004 ದಿನಾಂಕ: 12ನೇ ಜನವರಿ 2005**

**ಅರ್ಜಿದಾರರು :**

1. ಶ್ರೀಮತಿ ಸುರತ್‌ಬಿ ಗಂಡ ಕಾಸು ಚವ್ಹಾಣ
   ವಾಸ:ಭೂತನಾಳ ತಾಂಡ, ತಾಲ್ಲೂಕು: ಜಿಲ್ಲೆ-ಬಿಜಾಪುರ

**ವಿರುದ್ಧ**

**ಪ್ರತಿವಾದಿಗಳು:**

1. ಅಮೀನಸಾ ತಂದೆ ಫಾತಿಮಾ ಜಾತಗಾರ
   ವಾಸ:ಕನಕಿ ಬಜಾರ್, ಬಿಜಾಪುರ
2. ದಿ ಬ್ರಾಂಚ್ ಮ್ಯಾನೇಜರ್ ನ್ಯಾಶನಲ್ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ

**ಪ್ರಕಟಣೆ**

ಶ್ರೀ: ಶ್ರೀಮತಿ ಸುರತ್‌ಬಿ ಗಂಡ ಕಾಸು ಚವ್ಹಾಣ ಇವರುಗಳಾದ ತಾವು ಮೃತ ರಾಜು ತಂದೆ ಕಾಸು ಚವ್ಹಾಣ ಇವರ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ರಾಜು ತಂದೆ ಕಾಸು ಚವ್ಹಾಣ ಇವರು ಒಂದನೇ ಪ್ರತಿವಾದಿಗಳಾದ ಅಮೀನಸಾ ತಂದೆ ಫಾತಿಮಾ ಜಾತಗಾರ ಇವರ ಟಮ್ ಟಮ್ ನಂ-ಕೆಎ28:ಎ-44 ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್.179 ಕಾರ್ಮಿಕ ಪರಿಹಾರ ಆಯುಕ್ತರು ಉಪ ವಿಭಾಗ-2 ಬಿಜಾಪುರ ಜಿಲ್ಲೆ ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2 ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮರಣ:ಎಸ್‌ಆರ್-232:2004 ದಿನಾಂಕ: 12ನೇ ಜನವರಿ 2005**

**ಅರ್ಜಿದಾರರು :**

1. ಗುರಮ್ಮ ಅಲಿಯಾಸ್ ಗ್ಯಾನಮ್ಮ ಗಂಡ ಚನ್ನಪ್ಪ ದೇಸಾಯಿ
   ವಾಸ: ಹಡಗಿನಾಳ
2. ಶಾಂತಪ್ಪ ತಂದೆ ಗುರಪ್ಪ ಅಲಿಯಾಸ್ ಗೌಡಪ್ಪ ಧಾವಳಗಿ
   ವಾಸ: ಬಳಾವತ ತಾಲ್ಲೂಕು-ಮುದ್ದೇಬಿಹಾಳ, ಜಿಲ್ಲೆ-ಬಿಜಾಪುರ

**ವಿರುದ್ಧ**

**ಪ್ರತಿವಾದಿಗಳು:**

1. ಸುಧಾಮ ರಾಮದಾಸ ವಾಸಕರ್
   ವಾಸ: ಕುಂದೆವಾಹಾಳ ತಾಲ್ಲೂಕು-ಪನವೆಲ್, ಜಿಲ್ಲೆ-ರಾಯಗುಡ್ (ಮಹಾರಾಷ್ಟ್ರ ರಾಜ್ಯ)
2. ದಿ ಮ್ಯಾನೇಜರ್, ಓರಿಯಂಟೆಲ್ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ.

**ಪ್ರಕಟಣೆ**

ಶ್ರೀ: ಶ್ರೀಮತಿ 1) ಗುರಮ್ಮ ಅಲಿಯಾಸ್ ಗ್ಯಾನಮ್ಮ ಗಂಡ ಚನ್ನಪ್ಪ ದೇಸಾಯಿ 2) ಶಾಂತಪ್ಪ ತಂದೆ ಗುರಪ್ಪ ಅಲಿಯಾಸ್ ಗೌಡಪ್ಪ ಧಾವಳಗಿ ಇವರುಗಳಾದ ತಾವು ಮೃತ ಲಕ್ಷ್ಮೀ ಅಲಿಯಾಸ್ ಲಕ್ಷ್ಮೀಮಬಾಯಿ ಇವರ ಅಣ್ಣ-ಅಕ್ಕ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಲಕ್ಷ್ಮೀ ಅಲಿಯಾಸ್ ಲಕ್ಷ್ಮೀಮಬಾಯಿ ಇವರು ಒಂದನೇ ಪ್ರತಿವಾದಿಗಳಾದ ಸುಧಾಮ ರಾಮದಾಸ ವಾಸಕರ್ ಇವರ ಡಂಪರ್ ನಂ-ಎಮ್‌ಹೆಚ್-08:ಹೆಚ್-0045ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್.180 ಕಾರ್ಮಿಕ ಪರಿಹಾರ ಆಯುಕ್ತರು ಉಪ ವಿಭಾಗ-2 ಬಿಜಾಪುರ ಜಿಲ್ಲೆ ಬಿಜಾಪುರ.

**KARNATAKA ADMINISTRATIVE TRIBUNAL B.D.A. COMPLEX, INDIRANAGAR, BANGALORE-38,**
**NOTIFICATION**
**No. KAT/EST (1)/VAC/45/04 Dated 19th January 2005**

It is hereby notified that in addition to sundays, Second Saturdays and General Holidays, notified by the Government of Karnataka for the Calendar Year, 2005, vide No. DPAR 15 HHL 2004, dated: 1.12.2004, the Karnataka Administrative Tribunal will remain closed for the Vacations as specified below, during the Calendar Year, 2005.

1. **SUMMER VACATION** : From Monday, the 25th April, 2005 to Friday, the 13th May, 2005 (bdi)
2. **DASARA VACATION** : From friday, the 14th October, 2005 to Wednesday, the 19th October, 2005 (bdi)
3. **WINTER VACATION** : From Monday, the 26th December, 2005 to Friday, the 30th December, 2005 (bdi).

As regards, the sitting of Vacation Benches, to disposed of urgent matters during Vacations, separate Notifications will be issued at the appropriate time.

By Order of Hon'ble the Acting Chairman,
PR-181 Registrar, Karnataka Administrative Tribunal,
Bangalore-38

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ನಡವಳಿಗಳು, ಬೆಂಗಳೂರು**

**ವಿಷಯ :** ಶ್ರೀಮತಿ ಕೆ. ಹೆಚ್. ಅನುಸೂಯ ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಘಟಕ, ಉಂಡಿಗನಾಳು, ಅರಸೀಕೆರೆ ತಾಲ್ಲೂಕು ಹಾಸನ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಇಲಾಖಾ ವಿಚಾರಣೆ ಅಂತಿಮ ಆದೇಶ.

**ಓದಲಾಗಿದೆ :**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂ: ಡಿಪಿಎನ್:16:ಸಿಆರ್ 31/99-2000 ದಿನಾಂಕ: 12.12.2002.
2. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 21.12.2002.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್:16:ಸಿಆರ್:31:99-2000 ದಿನಾಂಕ: 30.5.2003.
4. ವಿಚಾರಣಾ ವರದಿಯ ಸಂ:ವಿಅ:ವಿಚಾರಣೆ:ಎನ್‌ಜಿ:20/03-04 ದಿನಾಂಕ: 13.09.2004.
5. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್:16:ಸಿಆರ್:31:99-2000 ದಿನಾಂಕ: 26.10.2004.
6. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 20.11.2004.

**ಪ್ರಸ್ತಾವನೆ:**

ಶ್ರೀಮತಿ ಕೆ. ಹೆಚ್. ಅನುಸೂಯ ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಇವರು ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಕುಂಚಾವರಂ, ಗುಲ್ಬರ್ಗಾ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 4.6.1985 ರಿಂದ 22.04.2003 ರವರೆಗೆ ಅನಧಿಕೃತ ಗೈರುಹಾಜರಿ ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2) ರಲ್ಲಿನ ಪತ್ರದಲ್ಲಿ ಸಲ್ಲಿಸಿದ ಲಿಖಿತ ಅಹವಾಲನ್ನು ಪರಿಶೀಲಿಸಿ, ಅದು ಸಮರ್ಪಕವಾಗಿರದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತ ಅಧಿಕಾರಿಗಳು (ಜಾಗೃತ ಕೋಶ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು, ಮೇಲೆ ಓದಲಾದ (4)ರಂತೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ (5)ರಲ್ಲಿನ ಸೂಚನಾಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (6)ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್:16:ಸಿಆರ್:31:99-2000 ಬೆಂಗಳೂರು ದಿನಾಂಕ: 12/15ನೇ ಜನವರಿ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೊಹಮ್ಮದ್ ಸನಾವುಲ್ಲ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರು ಆದ ನಾನು ಶ್ರೀಮತಿ ಕೆ. ಹೆಚ್. ಅನುಸೂಯ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಘಟಕ, ಉಂಡಿಗನಾಳು, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ ಇವರು ದಿನಾಂಕ: 4.6.1985 ರಿಂದ 22.4.2003 ರವರೆಗೆ ಕರ್ತವ್ಯಕ್ಕೆ ಗೈರುಹಾಜರಾಗಿರುವುದರಿಂದ ದಂಡನೆಯಾಗಿ ಸದರಿ ನಿಯಮ 8(viii)ರ ಅನ್ವಯ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿದ್ದೇನೆ.

**ಮೊಹಮ್ಮದ್ ಸನಾವುಲ್ಲ**

ಪಿ.ಆರ್.182 ಆಯುಕ್ತರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಾವಣಗೆರೆ**

**ಪ್ರಕಟಣೆ ಸಂ:ಡಿಬಿಸಿಎಂ:ಅಕಾತ:ಶಿವೇ:ಸಿಆರ್-41:04-05 ದಿನಾಂಕ: 5ನೇ ಜನವರಿ 2005**

**ವಿಷಯ :** 2004-05ನೇ ಸಾಲಿನಲ್ಲಿ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ನ್ಯಾಯಾಧೀಕರಣದಲ್ಲಿ ತರಬೇತಿಗಾಗಿ ಅರ್ಜಿಗಳನ್ನು ಆಹ್ವಾನಿಸುವ ಕುರಿತು.

**ಉಲ್ಲೇಖ :** 1. ಸರ್ಕಾರದ ಆದೇಶ ಸಂ: ಎಸ್‌ಡಬ್ಲ್ಯೂಎಲ್:68:ಎಸ್‌ಡಬ್ಲ್ಯೂ:89, ದಿನಾಂಕ: 2.11.90

2. ಸರ್ಕಾರದ ಆದೇಶ ಸಂ: ಸಕಇ: 205:ಬಿಎಂಎಸ್:98, ದಿನಾಂಕ: 7.10.99

ದಾವಣಗೆರೆ ಜಿಲ್ಲೆಯಲ್ಲಿ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ 2004-05ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖಾ ವತಿಯಿಂದ ನ್ಯಾಯಾಧೀಕರಣದಲ್ಲಿ ತರಬೇತಿಯನ್ನು ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ತರಬೇತಿಗಾಗಿ ಅರ್ಜಿಯನ್ನು ಸಲ್ಲಿಸುವ ಅಭ್ಯರ್ಥಿಗಳು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಿರಬೇಕು.

**ನಿಬಂಧನೆಗಳು**

1. ಅಭ್ಯರ್ಥಿಯು ಮತೀಯ ಅಲ್ಪಸಂಖ್ಯಾತರ ಸಮುದಾಯ ಮುಸ್ಲಿಂ, ಕ್ರಿಶ್ಚಿಯನ್, ಸಿಖ್, ಪಾರ್ಸಿ, ಜೈನ್ ಹಾಗೂ ಬೌದ್ಧ ಜನಾಂಗಕ್ಕೆ ಸೇರಿದವರಾಗಿರಬೇಕು ಹಾಗೂ ಜಾತಿ ಆದಾಯ ಪರಿಶೀಲನಾ ಪ್ರಮಾಣ ಪತ್ರವನ್ನು ಸಂಬಂಧಿಸಿದ ಅಧಿಕಾರಿಗಳಿಂದ ಪಡೆದು ದೃಢೀಕೃತ ಜೆರಾಕ್ಸ್ ಪ್ರತಿಯನ್ನು ಲಗತ್ತಿಸುವುದು.
2. ಅಭ್ಯರ್ಥಿಯು ಗರಿಷ್ಠ ವಯೋಮಿತಿ 30 ವರ್ಷದೊಳಗಿರಬೇಕು.
3. ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಅಡ್ವೋಕೇಟ್ ಆಗಿ ಕಾರ್ಯನಿರ್ವಹಿಸಲು ನಿಗದಿಪಡಿಸಲಾದ ಕಾನೂನು ಪರೀಕ್ಷೆಯಲ್ಲಿ ತೇರ್ಗಡೆಯಾಗಿ 2 ವರ್ಷಗಳ ಅವಧಿಯೊಳಗಿರುವವರು ಮಾತ್ರ ತರಬೇತಿಗೆ ಅರ್ಜಿಸಲ್ಲಿಸಲು ಅರ್ಹರಾಗಿರುತ್ತಾರೆ.
4. ಅಭ್ಯರ್ಥಿಯ ಕುಟುಂಬದ ವಾರ್ಷಿಕ ವರಮಾನ ರೂ. 15000-00ಕ್ಕೆ ಮೀರಿರಬಾರದು.
5. ತರಬೇತಿಯು 4 ವರ್ಷಗಳ ಅವಧಿಯಾಗಿದ್ದು, ಮಾಸಿಕ ರೂ. 1000-00ಗಳ ಶಿಷ್ಯವೇತನ ನೀಡಲಾಗುವುದು.
6. ಕಾನೂನು ತರಬೇತಿಗೆ ದಾವಣಗೆರೆ ಜಿಲ್ಲೆಯ ಇಬ್ಬರು ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು.
7. ತರಬೇತಿಯ ಅವಧಿಯ ಮಧ್ಯ ಭಾಗದಲ್ಲಿ ತರಬೇತಿಗೆ ಗೈರು ಹಾಜರಾದಲ್ಲಿ ಪಡೆಯಲಾಗಿರುವ ಶಿಷ್ಯವೇತನದ ಹಣವನ್ನು ಬಡ್ಡಿಯೊಂದಿಗೆ ಹಿಂದಿರುಗಿಸಬೇಕಾಗುವುದು.
8. ಅಭ್ಯರ್ಥಿಯು ತಮ್ಮ ಹೆಸರನ್ನು ಬಾರ್ ಕೌನ್ಸಿಲ್‌ನಲ್ಲಿ ನೊಂದಾಯಿಸಿರಬೇಕು.
9. ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳ ವಕೀಲ ವೃತ್ತಿಯಲ್ಲಿ ಅನುಭವವುಳ್ಳ ಯಾವುದೇ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸಲಾಗುತ್ತದೆ.
10. ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕ: 24.1.2005
11. ಅಪೂರ್ಣವಾದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ಇಲ್ಲದೆ ತಿರಸ್ಕರಿಸಲಾಗುವುದು.

ಹೆಚ್ಚಿನ ವಿವರಗಳಿಗೆ ಹಾಗೂ ಅರ್ಜಿ ನಮೂನೆಯನ್ನು ಜಿಲ್ಲಾ ಅಧಿಕಾರಿಗಳು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ ದಾವಣಗೆರೆ ಇಲ್ಲಿ ಕಛೇರಿಯ ವೇಳೆಯಲ್ಲಿ ಪಡೆಯಬಹುದಾಗಿದೆ;

ಜಿಲ್ಲಾ ಅಧಿಕಾರಿಗಳು,

ಪಿ.ಆರ್.183 ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಾವಣಗೆರೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಪ್ರಿಲಿಮಿನರಿ ಅಧಿಸೂಚನೆ**

**ನಂ: ಕೆಎಸ್‌ಎ:ಸಿಆರ್:8/2004-05 ದಿನಾಂಕ: 12ನೇ ಜನವರಿ 2005**

ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಪುರಸಭಾ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ಇರುವ ಮನೆಗಳು ಒತ್ತೊತ್ತಾಗಿದ್ದು, ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲೀ ಇರುವ ಗುಡಿಸಲು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಸಂಬಂಧಪಟ್ಟ ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯಕವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಮೇಲ್ಕಂಡ ಎಲ್ಲಾ ಕಾರಣಗಳಿಂದ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ ಶೇಷಾದ್ರಿಪುರ ಬೆಂಗಳೂರು-20 ರವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳವರೆಗೆ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಪುರಸಭಾ ಪರಿಮಿತಿಯಲ್ಲಿರುವ ಕೆಂಗೇರಿ ಸ.ನಂ: 178/5ರ ಕಸ್ತೂರಮ್ಮ ಕೊಳಚೆ ಪ್ರದೇಶದ ವಿವರ ಮತ್ತು ಚೆಕ್ಕುಬಂದಿ ತಃಖ್ತೆ

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಆಸ್ತಿ ಸಂಖ್ಯೆ | ವಿಸ್ತೀರ್ಣ (ಚ.ಅ) | ಚೆಕ್ಕುಬಂದಿಗಳು | |
|---|---|---|---|---|---|---|
| 1. | ಕಸ್ತೂರಮ್ಮ ಕೊಳಚೆ ಪ್ರದೇಶ, ಕೆಂಗೇರಿ, ಬೆಂಗಳೂರು. | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ (ಸಿ.ಡಿ.ಟಿ.ಬಿ) | 178/5 | 0-23 | ಪೂರ್ವಕ್ಕೆ | 78/4 |
| | | | | | ಪಶ್ಚಿಮಕ್ಕೆ | 78/3, 178/6 |
| | | | | | ಉತ್ತರಕ್ಕೆ | ರೈಲ್ವೇ ರಸ್ತೆ, |
| | | | | | ದಕ್ಷಿಣಕ್ಕೆ | ರಾಜ್ಯ ಹೆದ್ದಾರಿ |

**ಎಂ. ಎ. ಸಾಧಿಕ್**

ಪಿ.ಆರ್.184 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

### ನಂ: ಕೆಎಸ್ಎ:ಸಿಆರ್:14/2004-05 ದಿನಾಂಕ: 12ನೇ ಜನವರಿ 2005

ಬೆಂಗಳೂರು, ರಾಜಾಜಿನಗರ 1ನೇ ಬ್ಲಾಕ್‌ನಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವು ಜನಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯ ವಾತಾವರಣದಿಂದ ಕೂಡಿರುತ್ತದೆ. ಸದರಿ ಪ್ರದೇಶಕ್ಕೆ ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಸೌಲಭ್ಯಗಳನ್ನು ಒದಗಿಸಲು ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯಕವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ ಶೇಷಾದ್ರಿಪುರ, ಬೆಂಗಳೂರು-20 ರವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳವರೆಗೆ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ನಗರ ಕಾರ್ಪೋರೇಷನ್ ವ್ಯಾಪ್ತಿಗೆ ಬರುವ ಬೆಂಗಳೂರು ರಾಜಾಜಿನಗರ 1ನೇ ಬ್ಲಾಕ್‌ನಲ್ಲಿ ಇರುವ ಭೀಮಶಕ್ತಿನಗರ ಕೊಳಚೆ ಪ್ರದೇಶದ ಸ.ನಂ. 11 ವಿಸ್ತೀರ್ಣ 0-37 ಗುಂಟೆ ವಿಸ್ತೀರ್ಣ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಆಸ್ತಿ ಸಂಖ್ಯೆ | ವಿಸ್ತೀರ್ಣ (ಚ.ಅ) | ಚೆಕ್ಕುಬಂದಿಗಳು | |
|---|---|---|---|---|---|---|
| 1. | ಭೀಮಶಕ್ತಿ ನಗರ 1ನೇ ಬ್ಲಾಕ್, ಗಂಗಾಧರೇಶ್ವರ ಬಡಾವಣೆ | ಸಿಟಿ ಸರ್ವೆ ದಾಖಲೆಯಂತೆ ಸಿಐಟಿಬಿ ಜಿ.ಕೆ.ಚಂದ್ರರಾವ್ | 11 | 0-37 | ಪೂರ್ವಕ್ಕೆ | ಬಿ.ಡಬ್ಲ್ಯೂ.ಎಸ್.ಎಸ್.ಬಿ. ವಾಟರ್ ಟ್ಯಾಂಕ್ |
| | | | | | ಪಶ್ಚಿಮಕ್ಕೆ | ಸಿ.ಟಿ.ಎಸ್. ನಂ: 32,33,31, 36,37,38,39,40, ಸಿ.ಟಿ.ಸಿ ನಂ.11 ರ ಉಳಿಕೆ ಪ್ರದೇಶ |
| | | | | | ಉತ್ತರಕ್ಕೆ | ಸಿ.ಟಿ.ಎಸ್. ನಂ: 11ರ ಉಳಿಕೆ ಪ್ರದೇಶ |
| | | | | | ದಕ್ಷಿಣಕ್ಕೆ | ಸಿ.ಟಿ.ಎಸ್ ನಂ. 11ರ ಉಳಿಕೆ ಪ್ರದೇಶ |

**ಎಂ. ಎ. ಸಾಧಿಕ್**

ಪಿ.ಆರ್.185 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ :** ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ತಾಲ್ಲೂಕು, ಉತ್ತೇನಹಳ್ಳಿ ಗ್ರಾಮದಲ್ಲಿ ಬ್ಲಾಕ್ ಗ್ರಾನೈಟ್‌ಗಾಗಿ ಶ್ರೀಮತಿ ಸಿ. ನಳಿನಿ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 223ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ

**ಉಲ್ಲೇಖ :**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗು:223:2004-05:20180 ದಿನಾಂಕ: 27.03.2004.
2. ಹಿರಿಯ ಭೂ ವಿಜ್ಞಾನಿ, ಮೈಸೂರು ರವರ ಪತ್ರ ಸಂಖ್ಯೆ: ಗಭೂಇ: ಹಿಭೂವಿ: ಮೈ:ಡಿಸಿಬಿ:ಕಗು:223:2004-05: 3968 ದಿನಾಂಕ: 18.8.2004.

**ಪ್ರಸ್ತಾವನೆ:**

ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ತಾಲ್ಲೂಕು, ಉತ್ತೇನಹಳ್ಳಿ ಗ್ರಾಮದ ಸರ್ವೆ ನಂ. 9(ಪಿ) ರಲ್ಲಿ ಶ್ರೀಮತಿ ಸಿ. ನಳಿನಿ ರವರಿಗೆ 2-00 ಎಕರೆಗೆ ದಿನಾಂಕ: 3.11.1998 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2)ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,91,271/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ-1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಸರ್ಕಾರದ ಅಧಿಸೂಚನೆ 3 ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಸಂಖ್ಯೆ: ಗಭೂಇ:ಡಿಸಿಬಿ:ಕಗು:223:2004-05:15451 ದಿನಾಂಕ: 20ನೇ ಜನವರಿ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ತಾಲ್ಲೂಕು, ಉತ್ತೇನಹಳ್ಳಿ ಗ್ರಾಮದ ಸರ್ವೆ ನಂ. 9 (ಪಿ) ರಲ್ಲಿ 2-00 ಎಕರೆಗೆ ಗ್ರೇ ಗ್ರಾನೈಟ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ: 223ರ ಗಣಿ ಗುತ್ತಿಗೆ ನಿಷ್ಕ್ರಿಯವಾಗಿಟ್ಟಿರುವ ಕಾರಣ ಗುತ್ತಿಗೆಯನ್ನು ನಿಯಮದಂತೆ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ಪಿ.ಆರ್.186

ನಿರ್ದೇಶಕರು,
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ,**

**ಅಧಿಸೂಚನೆ ಸಂಖ್ಯೆ: 1:ಸಂವಿ:ಸಿಓಪಿ:2005 ದಿನಾಂಕ: 8ನೇ ಫೆಬ್ರವರಿ 2005**

ಬೆಂಗಳೂರು ನಗರ, ಹೈಗ್ರೌಂಡ್ಸ್ ಸಂಚಾರ ಠಾಣೆ ಮತ್ತು ಸದಾಶಿವನಗರ ಸಂಚಾರ ಠಾಣೆ ವ್ಯಾಪ್ತಿಯಲ್ಲಿರುವ ರಮಣಮಹರ್ಷಿ ರಸ್ತೆ ಕಾವೇರಿ ಜಂಕ್ಷನ್, ಪ್ಯಾಲೇಸ್ ಕ್ರಾಸ್ ಜಂಕ್ಷನ್, ವಿಂಡ್ಸರ್ ಮ್ಯಾನರ್ ಜಂಕ್ಷನ್, ಕೆ. ಕೆ. ರಸ್ತೆ ಶಿವಾನಂದ ವೃತ್ತಗಳಲ್ಲಿ ಅಧಿಕ ವಾಹನ ದಟ್ಟಣೆಯಿಂದಾಗಿ ಆಗಾಗ್ಗೆ ಸಂಚಾರವು ಸ್ಥಗಿತಗೊಂಡು ಸುಗಮ ಸಂಚಾರಕ್ಕೆ ಅಡಚಣೆಯಾಗುತ್ತಿದ್ದು ಸುಗಮ ಸಂಚಾರದ ನಿರ್ವಹಣೆ ಅತ್ಯಂತ ಕಷ್ಟಕರವಾಗಿರುತ್ತದೆ. ಈ ರಸ್ತೆಗಳಲ್ಲಿ ಅತಿಗಣ್ಯ/ಗಣ್ಯ ವ್ಯಕ್ತಿಗಳ ನಿರಂತರ ಸಂಚಾರವಿರುತ್ತದೆ, ಹಾಗೂ ಅರಮನೆ ಮೈದಾನದಲ್ಲಿ ನಡೆಯುವ ಸಭೆ ಸಮಾರಂಭಗಳ ವೇಳೆಯಲ್ಲೂ ಸಹ ಹೆಚ್ಚಿನ ಸಂಚಾರ ದಟ್ಟಣೆ ಇರುತ್ತದೆ. ಸಾರ್ವಜನಿಕ ಹಿತಾಸಕ್ತಿಯಿಂದ ಈ ರಸ್ತೆಗಳಲ್ಲಿ ವಾಹನಗಳ ಸುಗಮ ಸಂಚಾರ ಹಾಗೂ ಸುರಕ್ಷತೆ ದೃಷ್ಟಿಯಿಂದ ಬಿ.ಎಂ.ಟಿ.ಸಿ. ಬಸ್ಸುಗಳನ್ನು ಹೊರತುಪಡಿಸಿ ರಾಜ್ಯ ಮತ್ತು ಹೊರ ರಾಜ್ಯಗಳ ಸಾರಿಗೆ ಸಂಸ್ಥೆಗಳ ಪ್ರಯಾಣಿಕರ ಭಾರಿ ಸಾರಿಗೆ ವಾಹನಗಳು, ಖಾಸಗಿ ಸ್ವಾಮ್ಯದ ಪ್ರಯಾಣಿಕರ ಭಾರಿ ಸಾರಿಗೆ ವಾಹನಗಳು (ಬಸ್ಸುಗಳು) ಬಳ್ಳಾರಿ ರಸ್ತೆಯಿಂದ ನಗರಕ್ಕೆ ಪ್ರವೇಶ ಮಾಡುವಲ್ಲಿ ಇವುಗಳ ಸಂಚಾರವನ್ನು ಮೇಖ್ರಿ ವೃತ್ತದಲ್ಲಿ ನಿರ್ಬಂಧಿಸಿ ಮಾರ್ಗ ಬದಲಾಯಿಸುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಎಸ್. ಮರಿಸ್ವಾಮಿ, ಐ.ಪಿ.ಎಸ್., ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಭಾರತೀಯ ಮೋಟಾರ್ ವಾಹನ ಕಾಯ್ದೆ 1988ರ ಕಲಂ 115 ಹಾಗೂ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಕಾಯ್ದೆ 1960ರ ಕಲಂ 3ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ವಿಧಿಸಿದ್ದೇನೆ.

> "ದೇವನಹಳ್ಳಿ ಹಾಗೂ ದೊಡ್ಡಬಳ್ಳಾಪುರ ಕಡೆಗಳಿಂದ ಬಳ್ಳಾರಿ ರಸ್ತೆಯಲ್ಲಿ ಉತ್ತರದಿಂದ ದಕ್ಷಿಣಕ್ಕೆ ಸಾಗಿ ಬಂದು ರಮಣಮಹರ್ಷಿ ರಸ್ತೆ ಮುಖಾಂತರ ಬೆಂಗಳೂರು ನಗರದ ಮೆಜೆಸ್ಟಿಕ್ ಕಡೆಗೆ/ಸಿಟಿ ಮಾರ್ಕೆಟ್ ಕಡೆಗೆ ತೆರಳುವ (ಬಿ.ಎಂ.ಟಿ.ಸಿ. ಬಸ್ಸುಗಳನ್ನು ಹೊರತುಪಡಿಸಿ) ರಾಜ್ಯ ಮತ್ತು ಹೊರ ರಾಜ್ಯಗಳ ಸಾರಿಗೆ ಸಂಸ್ಥೆಗಳ ಪ್ರಯಾಣಿಕರ ಭಾರಿ ಸಾರಿಗೆ ವಾಹನಗಳು, ಖಾಸಗಿ ಸ್ವಾಮ್ಯದ ಪ್ರಯಾಣಿಕರ ಭಾರಿ ಸಾರಿಗೆ ವಾಹನಗಳ (ಬಸ್ಸುಗಳನ್ನು) ಪ್ರವೇಶವನ್ನು ಮೇಖ್ರಿ ವೃತ್ತದಿಂದ ಪ್ಯಾಲೇಸ್ ಕ್ರಾಸ್‌ವರೆಗೆ (ಉತ್ತರದಿಂದ-ದಕ್ಷಿಣಕ್ಕೆ) ನಿರ್ಬಂಧಿಸಿ ಮೇಖ್ರಿ ವೃತ್ತದಲ್ಲಿ ಪಶ್ಚಿಮಕ್ಕೆ ಬಲ ತಿರುವು ಪಡೆದು ಸಿ.ವಿ. ರಾಮನ್ ರಸ್ತೆಯಲ್ಲಿ ಸಾಗಿ ಬಿ. ಹೆಚ್.ಇ.ಎಲ್ ವೃತ್ತದಲ್ಲಿ ದಕ್ಷಿಣಕ್ಕೆ ಎಡ ತಿರುವು ಪಡೆದು, ಮಾರಮ್ಮ ದೇವಸ್ಥಾನದ ವೃತ್ತದಲ್ಲಿ ಪಶ್ಚಿಮಕ್ಕೆ ಬಲ ತಿರುವು ಪಡೆದು ಮಾರ್ಗೊಸಾ ರಸ್ತೆ-ಮಲ್ಲೇಶ್ವರಂ ವೃತ್ತ-ಲಿಂಕ್ ರಸ್ತೆ-ಶೇಷಾದ್ರಿಪುರಂ 1ನೇ ಮುಖ್ಯ ರಸ್ತೆಯಲ್ಲಿ ಸ್ವಸ್ತಿಕ್ ವೃತ್ತದಲ್ಲಿ ಬಲ ತಿರುವು ತೆಗೆದುಕೊಂಡು, ಮೆಜೆಸ್ಟಿಕ್ ಕಡೆಗೆ ಹೋಗುವ ಬಸ್ಸುಗಳು ರಾಜೀವ್‌ಗಾಂಧಿ ವೃತ್ತದ ಮುಖೇನ ಹಾಗೂ ಸಿಟಿ ಮಾರ್ಕೆಟ್, ಮೈಸೂರು ಬ್ಯಾಂಕ್ ಕಡೆಗೆ ಹೋಗುವ ಬಸ್ಸುಗಳು ಸ್ವಸ್ತಿಕ್ ವೃತ್ತ-ಎಸ್.ಸಿ ರಸ್ತೆ-ಕಿನೋ ಟಾಕೀಸ್ ಜಂಕ್ಷನ್-ಆನಂದರಾವ್ ವೃತ್ತ-ಸುಬ್ಬಣ್ಣ ವೃತ್ತ-ಶೇಷಾದ್ರಿ ರಸ್ತೆ ಮುಖೇನ ಸಂಚರಿಸಲು ಅವಕಾಶ ಕಲ್ಪಿಸಿದೆ."

"ಫ್ಯಾಕ್ಟರಿ ಹಾಗೂ ಶಾಲಾ ಕಾಲೇಜಿನ ಬಸ್ಸುಗಳಿಗೆ (1) ಮೇಖ್ರಿ ವೃತ್ತದಲ್ಲಿ ಎಡ ತಿರುವು ಪಡೆದು ಜಯಮಹಲ್ ರಸ್ತೆ ಮುಖಾಂತರ ಸಾಗಲು ಹಾಗೂ (2) ರಮಣಮಹರ್ಷಿ ರಸ್ತೆಯಲ್ಲಿ ಪ್ಯಾಲೇಸ್ ಕ್ರಾಸ್ ಜಂಕ್ಷನ್ ವರೆಗೆ ಬಂದು ಎಡ ತಿರುವು ಪಡೆದು ಪ್ಯಾಲೇಸ್ ಕ್ರಾಸ್ ರಸ್ತೆ ಮುಖೇನ ಸಂಚರಿಸಲು ಅವಕಾಶ ಕಲ್ಪಿಸಿದೆ."

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 14.02.2005 ರಿಂದ ಪ್ರಾಯೋಗಿಕವಾಗಿ ಒಂದು ತಿಂಗಳ ಕಾಲ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 08.02.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

ಎಸ್. ಮರಿಸ್ವಾಮಿ

ಪಿ.ಆರ್.280

ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಅಲ್ಟ್ರಾ ಬಿಸಿನೆಸ್ ಮೆಷಿನ್ಸ್ ಪ್ರೈವೇಟ್ ಲಿಮಿಟೆಡ್**

**ನೊಂದಾಯಿತ ಕಛೇರಿ: ನಂ.11/1 ಮತ್ತು 11/5, ಹಳೇ ಮಾರ್ಕೆಟ್ ರಸ್ತೆ, ವಿಶ್ವೇಶ್ವರಪುರಂ, ಬೆಂಗಳೂರು-560 004**

**ಸಭೆ ನಡೆಯುವ ಬಗ್ಗೆ ಸೂಚನೆ**

ಈ ಮೂಲಕ ಸೂಚಿಸುವುದೇನೆಂದರೆ ಲೇಣೆದಾರರುಗಳ ಸಭೆಯು 11/1 ಮತ್ತು 11/5, ಹಳೇ ಮಾರ್ಕೆಟ್ ರಸ್ತೆ, ವಿಶ್ವೇಶ್ವರಪುರಂ, ಬೆಂಗಳೂರು-560 004 ಇಲ್ಲಿರುವ ನೊಂದಾಯಿತ ಕಚೇರಿಯಲ್ಲಿ ಈ ಕೆಳಗೆ ತಿಳಿಸಿರುವ ವ್ಯವಹಾರಗಳ ಬಗ್ಗೆ ವ್ಯವಹರಿಸಲು 16ನೇ ಮಾರ್ಚ್ 2005ರ ಬುಧವಾರದಂದು ಬೆಳಿಗ್ಗೆ 11.00 ಗಂಟೆಗೆ ನಡೆಯಲಿದೆ.

**ವಿಷಯ:** ಈ ಕೆಳಗೆ ತಿಳಿಸಿರುವ ನಿರ್ಣಯಗಳನ್ನು ಪರಿಗಣಿಸಿ ಸೂಕ್ತವೆಂದು ಕಂಡುಬಂದಲ್ಲಿ ವಿಶೇಷ ನಿರ್ಣಯಗಳಾಗಿ ಜಾರಿಗೊಳಿಸುವುದು.

1956ರ ಕಂಪನಿಗಳ ಕಾಯ್ದೆಯ ಅನ್ವಯವಾಗುವ ಉಪಬಂಧಗಳ ಅನುಸಾರ ಹಾಗೂ ಅಗತ್ಯವಾದಂತೆ ಇತರೆ ಅನುಮೋದನೆಗಳು/ ಸಮ್ಮತ್ರಗಳಿಗೆ ಒಳಪಟ್ಟಂತೆ, ಲೇಣೆದಾರರ ಸಮ್ಮತ್ರದನುಸಾರವಾಗಿ "ಲೇಣೆದಾರರ ಸ್ವಯಂ ಮುಕ್ತಾಯಗೊಳಿಸುವಿಕೆ" ಅನ್ವಯ ಕಂಪನಿಯನ್ನು ಮುಚ್ಚುವುದು. ಮತ್ತೆ ನಿರ್ಣಯಿಸುವುದೇನೆಂದರೆ ಅಗತ್ಯವಾದಂತೆ ಅಂತಹ ಇತರೆ ಸಮ್ಮತ್ರಗಳು/ ಅನುಮೋದನೆಗಳಿಗೆ ಒಳಪಟ್ಟಂತೆ ರೂ. 25,000 ಸಂಭಾವನೆ ಜೊತೆಗೆ ಖರ್ಚು ವೆಚ್ಚಗಳ ಮೇಲೆ ಶ್ರೀ ಸಿ. ವಿ. ಎಸ್. ಮಣಿಯನ್, ಚಾರ್ಟರ್ಡ್ ಅಕೌಂಟೆಂಟ್, ಮಧುರೈ ಇವರನ್ನು ಈ ಮೂಲಕ ಕಂಪನಿಯ ಪರಿಸಮಾಪಕರಾಗಿ ನೇಮಕ ಮಾಡಲಾಗಿದೆ.

ಈ ದಿನ ಎಂದರೆ 17ನೇ ಜನವರಿ 2005

ಅಲ್ಟ್ರಾ ಬಿಸಿನೆಸ್ ಮೆಷಿನ್ ಪ್ರೈವೇಟ್ ಲಿಮಿಟೆಡ್
**ಭಾರತ್ ಕೃಷ್ಣ ಶಂಕರ್**
ನಿರ್ದೇಶಕರು / ಪರಿಸಮಾಪಕರು.

**ಸೂಚನೆ:**

1. ಸಾಮಾನ್ಯ ಮತ್ತು ವಿಶೇಷ ಪ್ರಾಕ್ಸಿಗಳ ನಮೂನೆಗಳನ್ನು ಲೇಣೆದಾರರಿಗೆ ಪ್ರತ್ಯೇಕವಾಗಿ ಕಳುಹಿಸಲಾದ ಸೂಚನೆಗಳೊಡನೆ ಕಳುಹಿಸಲಾಗಿದೆ. ಸಭೆಯಲ್ಲಿ ಉಪಯೋಗಿಸಲ್ಪಡುವ ಪ್ರಾಕ್ಸಿಗಳನ್ನು 14ನೇ ಮಾರ್ಚ್ 2005 ರಂದು ಬೆಳಿಗ್ಗೆ 11.00 ಗಂಟೆಯೊಳಗೆ ಕಂಪನಿಯ ನೋಂದಾಯಿತ ಕಛೇರಿಯಲ್ಲಿ ಸಲ್ಲಿಸಬೇಕು.
2. 1956ರ ಕಂಪನಿಗಳ ಕಾಯ್ದೆಯ ಪ್ರಕರಣ 173 (2)ರ ಅನ್ವಯ ವಿವರಣಾತ್ಮಕ ವರದಿ. ಕಂಪನಿಯ ಭದ್ರತೆ ಇಲ್ಲವಾಗಿದೆ. ಕಂಪನಿಯಿಂದ ಯಾವುದೇ ವ್ಯಾಪಾರ ಚಟುವಟಿಕೆಗಳನ್ನು ನಡೆಸಲಾಗುತ್ತಿಲ್ಲ. ಕಂಪನಿಯನ್ನು ಮುಚ್ಚುವುದು ಸೂಕ್ತವೆಂದು ಮಂಡಳಿಯು ಭಾವಿಸಿದೆ. ಕಂಪನಿಯ ಹೊಣೆಗಾರಿಕೆಗಳು ಸ್ವತ್ತಿಗಿಂತ ಹೆಚ್ಚಿವೆ. ಆದ್ದರಿಂದ ಲೇಣೆದಾರರ ಸ್ವಯಂ ಮುಕ್ತಾಯಗೊಳಿಸುವಿಕೆ ಮೂಲಕ ಪ್ರಸ್ತಾವನೆ ಮಾಡಿರುವ ನಿರ್ಣಯವನ್ನು ಅನುಮೋದನೆ ಮಾಡಲು ಮಂಡಳಿಯು ಶಿಫಾರಸ್ಸು ಮಾಡುತ್ತದೆ.

   ಯಾವುದೇ ನಿರ್ದೇಶಕರಿಗೆ ಆಸಕ್ತಿಯಿರುವುದಿಲ್ಲ.

   ಈ ದಿನ ಎಂದರೆ 17ನೇ ಜನವರಿ 2005

ಅಲ್ಟ್ರಾ ಬಿಸಿನೆಸ್ ಮೆಷಿನ್ ಪ್ರೈವೇಟ್ ಲಿಮಿಟೆಡ್
**ಭಾರತ್ ಕೃಷ್ಣ ಶಂಕರ್**
ನಿರ್ದೇಶಕರು / ಪರಿಸಮಾಪಕರು.

**ULTRA BUSINESS MACHINES PRIVATE LIMITED**
**Regd. Office: No. 11/1 & 11/5 Old Market Road**
**Visveshwarapuram, Bangalore-560 004**
**Notice of meeting**

Notice is hereby given that a meeting of Creditors will be held at the Registered Office situated at No. 11/1 & 11/5 Old Market Road, Visveshwarapuram, Bangalore-560 004 on Wednesday, the 16th March, 2005 at 11.00 A.M. to transact the following business:

**AGENDA**

To consider and if though fit, to pass the following resolutions as set out hereunder as special resolutions:

RESOLVED THAT pursuant to the applicable provisions of the Companies Act, 1956 and subject to such other approvals/consents as may be necessary, consent of the Creditors be and is hereby accorded to wind-up the Company, voluntarily, under "Creditors Voluntary winding-up".

RESOLVED FURTHER THAT Subject to such other consents/ approvals as may be necessary, Mr C.V.S. Manian, Chartered Accountant, Madurai be and is hereby appointed as the Liquidator of the Company at a remuneration of Rs. 25,000/- plus expenses.

Dated this 17th day of January, 2005

For Ultra Business Machines Pvt Ltd.
**BHARATH KRISHNA SANKAR**
Director/ Liquidator.

**Note:**

1. Forms of general and special proxies are sent along with the notices served on Creditors, individually. Proxies to be used at the meeting must be lodged with the Company's Registered Office not later than 11.00 A.M. on 14th March, 2005.

2. Explanatory statement under Section 173(2) of the Companies Act, 1956: The substratum of the Company is lost. No business activity is carried on by the Company. The Board is of the opinion that it is just and equitable to wind up the Company. The liabilities of the Company exceed the assets. Hence by way of Creditors voluntary winding up, the Board recommends the approval of the resolution as proposed.
None of the Directors is interested.
Dated this 17th day of January, 2005

For Ultra Business Machines Pvt Ltd.
**BHARATH KRISHNA SANKAR**
Director/ Liquidator.

PD-9

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ ಇವರ ನ್ಯಾಯಾಲಯ**

**ಸಂಖ್ಯೆ: ಎ2: 71-ಎ:ಗುನ್ನೆ-60/98/ಸಿಆರ್-01/98-99 ದಿನಾಂಕ: 12ನೇ ಜನವರಿ 2005**

ದಾವಣಗೆರೆ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಶ್ರೀ ಗಂಧದ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನವನ್ನು ದಾವಣಗೆರೆ ಜಿಲ್ಲೆಯ ಹರಿಹರ ಪೊಲೀಸ್ ಠಾಣೆಯ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71 (ಎ) ಪ್ರಕಾರ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ. ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನದ ವಿವರ ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನದ ವಿವರ | ಪೊಲೀಸ್ ಪ್ರಕರಣ ಸಂಖ್ಯೆ | ವಾಹನದ ಸಂಖ್ಯೆ | ಎಂಜಿನ್ ಸಂಖ್ಯೆ | ಚಾಸ್ಸಿಸ್ ಸಂಖ್ಯೆ | ಶ್ರೀಗಂಧದ ಪ್ರಮಾಣ |
|---|---|---|---|---|---|---|
| 1 | ಮಾರುತಿ ವ್ಯಾನ್ | 60/1998 | ಪಿವೈ-01 ಹೆಚ್-7301 | F 8 B IN 1371356 | ST-91 IN 168322 | 125 Kgs. |

ಮೇಲೆ ತೋರಿಸಿರುವ ವಾಹನದ ಬಗ್ಗೆ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನದ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ, ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲಿನ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಬಿ. ಗೋಪಾಲನಾಯ್ಕ್**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ದಾವಣಗೆರೆ ವಿಭಾಗ, ದಾವಣಗೆರೆ.

ಪಿ.ಆರ್.188

**ಕಂದಾಯ ಇಲಾಖೆ**

**ಅಧಿಸೂಚನೆ ಸಂಖ್ಯೆ: ಕಂಇ: 115 ಎಲ್‌ಆರ್‌ಎಂ: 2003 ಬೆಂಗಳೂರು, ದಿನಾಂಕ: 12ನೇ ಜನವರಿ 2005**

ಶ್ರೀ ಆದಿಚುಂಚನಗಿರಿ ಮರಿಯಪ್ಪ ರಾಮಯ್ಯ ಚಾರಿಟಬಲ್ ಟ್ರಸ್ಟ್, ಹೊನೇಗಲ್, ಚಿಕ್ಕಬಳ್ಳಾಪುರ ತಾಲ್ಲೂಕು ಇವರು ಕೋಲಾರ ಜಿಲ್ಲೆ, ಚಿಕ್ಕಬಳ್ಳಾಪುರ ತಾಲ್ಲೂಕು, ಬೂರಗಮಾಕಲಹಳ್ಳಿ ಗ್ರಾಮದ ಸರ್ವೆ ನಂಬರುಗಳು:

| | | |
|---|---|---|
| 1 ರಲ್ಲಿ | 3.31 | ಎಕರೆ, |
| 2 ರಲ್ಲಿ | 4.16 | ಎಕರೆ, |
| 3 ರಲ್ಲಿ | 5.39 | ಎಕರೆ, |
| 4 ರಲ್ಲಿ | 1.23 | ಎಕರೆ, |
| 5 ರಲ್ಲಿ | 1.04 | ಎಕರೆ, |
| 6 ರಲ್ಲಿ | 4.34 | ಎಕರೆ, |
| 7 ರಲ್ಲಿ | 3.03 | ಎಕರೆ, |
| 8 ರಲ್ಲಿ | 2.10 | ಎಕರೆ, |
| 9 ರಲ್ಲಿ | 1.27 | ಎಕರೆ, |
| 10 ರಲ್ಲಿ | 0.26 | ಎಕರೆ, |
| 11 ರಲ್ಲಿ | 24.29 | ಎಕರೆ, |
| 12 ರಲ್ಲಿ | 8.08 | ಎಕರೆ, ಮತ್ತು |
| 13 ರಲ್ಲಿ | 7.12 | ಎಕರೆ, |

ಅಂದರೆ, ಸ.ನಂ.1 ರಿಂದ 13ರಲ್ಲಿ 69.22 ಎಕರೆ ಮತ್ತು

ಹೊನೇಗಲ್ ಗ್ರಾಮ ಸರ್ವೆ ನಂಬರ್‌ಗಳು:

9/1 ರಲ್ಲಿ 1.15 ಎಕರೆ,
10 ರಲ್ಲಿ $0.17^1/_2$ ಎಕರೆ
ಅಂದರೆ, ಸ.ನಂ. 9/1 ಮತ್ತು
10 ರಲ್ಲಿ $1.32^1/_2$ ಎಕರೆ
ಒಟ್ಟು: $71.14^1/_2$ ಎಕರೆಗಳು.

ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್ (ಕಲಂ 109) ಸಿಆರ್:1/03-04, ದಿನಾಂಕ: 4.8.2003, 11.11.2003 ಮತ್ತು 28.07.2004ರ ಪತ್ರಗಳಲ್ಲಿ ಪ್ರಸ್ತಾಪಿತ ಗ್ರಾಮಗಳ ಮೇಲ್ಕಂಡ ಸರ್ವೆ ನಂಬರುಗಳಲ್ಲಿ **ಒಟ್ಟು: $71.14^1/_2$** ಎಕರೆ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109 (1ಎ) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ, 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಮತ್ತು ನಿಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಲ್ಲಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38-(ಬಿ) ಮತ್ತು (ಸಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80 ರಿಂದ ವಿನಾಯ್ತಿ ನೀಡಿ ಕೋಲಾರ ಜಿಲ್ಲೆ, ಚಿಕ್ಕಬಳ್ಳಾಪುರ ತಾಲ್ಲೂಕು, ಬೂರಗಮಾಕಲಹಳ್ಳಿ ಗ್ರಾಮದ ಸರ್ವೆ ನಂಬರುಗಳು: 1ರಲ್ಲಿ 3.31 ಎಕರೆ, 2ರಲ್ಲಿ 4.16 ಎಕರೆ, 3ರಲ್ಲಿ 5.39 ಎಕರೆ, 4ರಲ್ಲಿ 1.23 ಎಕರೆ, 5ರಲ್ಲಿ 1.04 ಎಕರೆ, 6ರಲ್ಲಿ 4.34 ಎಕರೆ, 7ರಲ್ಲಿ 3.03 ಎಕರೆ, 8ರಲ್ಲಿ 2.10 ಎಕರೆ, 9ರಲ್ಲಿ 1.27 ಎಕರೆ, 10ರಲ್ಲಿ 0.26 ಎಕರೆ, 11ರಲ್ಲಿ 24.29 ಎಕರೆ, 12ರಲ್ಲಿ 8.08 ಎಕರೆ, ಮತ್ತು 13ರಲ್ಲಿ 7.12 ಎಕರೆ, ಅಂದರೆ, ಸ.ನಂ.1 ರಿಂದ 13ರವರೆಗೆ 69.22 ಎಕರೆ, ಮತ್ತು ಹೊನೇಗಲ್ ಗ್ರಾಮದ ಸರ್ವೆ ನಂಬರ್: 9/1ರಲ್ಲಿ 1.15 ಎಕರೆ 10ರಲ್ಲಿ $0.17^1/_2$ ಎಕರೆ ಅಂದರೆ, ಸ.ನಂ. 9/1 ಮತ್ತು 10ರಲ್ಲಿ $1.32^1/_2$ ಎಕರೆ ಒಟ್ಟು: $71.14^1/_2$ ಎಕರೆಗಳ ಜಮೀನನ್ನು ಶ್ರೀ ಆದಿಚುಂಚನಗಿರಿ ಮರಿಯಪ್ಪ ರಾಮಯ್ಯ ಚಾರಿಟಬಲ್ ಟ್ರಸ್ಟ್, ಹೊನೇಗಲ್, ಚಿಕ್ಕಬಳ್ಳಾಪುರ ತಾಲ್ಲೂಕು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109 (1ಎ) ಅಡಿ ವಿನಾಯ್ತಿ ನೀಡಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5. ಶಿಕ್ಷಣ ಸಂಸ್ಥೆ ಆರಂಭಿಸುವ ಮುನ್ನ ಶಿಕ್ಷಣ ಇಲಾಖೆಯ ಅನುಮತಿಯನ್ನು ಸಹ ಪಡೆಯತಕ್ಕದ್ದು.
6. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯ್ತಿ ನೀಡಲು ಮಾತ್ರವಾಗಿರುತ್ತದೆ. ಇತರೆ ಯಾವುದೇ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶ ಇರುತ್ತದೆ.
7. ಬೂರಗಮಾಕಲಹಳ್ಳಿ ಗ್ರಾಮದ ಸ.ನಂ. 1, 7 ಮತ್ತು 8 ರಲ್ಲಿ ಹಾದುಹೋಗಿರುವ ಸಾರ್ವಜನಿಕ ರಸ್ತೆಗೆ ಹಾಗೂ ಸ.ನಂ. 9 ರಲ್ಲಿರುವ ದೇವಸ್ಥಾನಕ್ಕೆ ಮತ್ತು ಸ.ನಂ. 1, 2, 10,12 ಮತ್ತು 13ರಲ್ಲಿ ಹಾದುಹೋಗಿರುವ ಕಾಲುವೆಗೆ ಮತ್ತು ಹೊನೇಗಲ್ ಗ್ರಾಮದ ಸ.ನಂ. 10ರಲ್ಲಿ ಹಾದುಹೋಗಿರುವ ಸಾರ್ವಜನಿಕ ರಸ್ತೆಗೆ ಮತ್ತು ಹಾದು ಹೋಗಿರುವ ನೀರು ಬರುವ ಹಳ್ಳಕ್ಕೆ ಯಾವುದೇ ದಕ್ಕೆ ಉಂಟು ಮಾಡದಂತೆ ಷರತ್ತನ್ನು ವಿಧಿಸಲಾಗಿದೆ.
8. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ ಅಭಿವೃದ್ಧಿ ಪ್ರಾಧಿಕಾರ/ ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
9. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.220

**ಕೆ. ನರಸಿಂಹಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ).